ಕನ್ನಡ ಕವಿ ಕಾವ್ಯಮಾಲೆ—೬೦

# ‘ಬಾನು ಬೆಳಗಿತು

ತ್ರಿವೇಣಿ

ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು

ಮೊದಲ ಮುದ್ರಣ ೧೯೫೮



ಬೆಲೆ :
ಸಾಧಾರಣ ಪ್ರತಿ ೧–೫೦
ಕ್ಯಾಲಿಕೊ ಪ್ರತಿ ೩–೦೦

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು :

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.,
ಪ್ರೊಫೆಸರ್ ಮತ್ತು ಕನ್ನಡ ಇಲಾಖೆಯ ಮುಖ್ಯಾಧಿಕಾರಿಗಳು
ಶಾರದಾವಿಲಾಸ ಕಾಲೇಜು, ಮೈಸೂರು.

ಮುದ್ರಕರು :
ಜಿ. ಎಚ್. ರಾಮರಾವ್, ಬಿ.ಎಸ್‌ಸಿ.,
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,
ಮೈಸೂರು.

# ಅರಿಕೆ

'ಪ್ರಜಾವಾಣಿ'ಯಲ್ಲಿ ಧಾರಾವಾಹಿಯಾಗಿ ಬೆಳಕು ಕಂಡ 'ಬಾನು ಬೆಳಗಿತು' ಕಾದಂಬರಿ ಇದೀಗ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಕಾದಂಬರಿಯನ್ನು ಮೊದಲು ಪ್ರಕಟಿಸಿದ 'ಪ್ರಜಾವಾಣಿ' ಪತ್ರಿಕೆಗೂ, ಅನಂತರ ಪುಸ್ತಕರೂಪದಲ್ಲಿ ಇದನ್ನು ಹೊರತಂದ ಶಾರದಾ ಮಂದಿರದ ಶ್ರೀ ಎಚ್. ಎಂ. ಶಂಕರನಾರಾಯಣರಾಯರಿಗೂ ನಾನು ಕೃತಜ್ಞಳು.

೧೧೫೨. ಚಾಮರಾಜಪುರಂ.
ಮೈಸೂರು.

ತ್ರಿವೇಣಿ.

# ಬಾನು ಬೆಳಗಿತು

ಸುಮಾರು ಹದಿನೈದು ದಿನಗಳಿಂದಲೂ ಅತ್ತಿಗೆ–ನಾದಿನಿಯರ ಜಗಳ ಪ್ರಾರಂಭವಾಗಿತ್ತು. ಅದಕ್ಕೆ ಕಾರಣ ಇಷ್ಟು—

ವತ್ಸಲೆಯ ಅಣ್ಣ ಸುಬ್ಬರಾಮುವಿಗೆ ಮದುವೆ ನಿಶ್ಚಯವಾಗಿತ್ತು. ವತ್ಸಲೆಗಿದ್ದ ಒಂದು ವ್ಯಥೆಯೆಂದರೆ ಅವಳ ಅಣ್ಣನ ಮದುವೆಗೆ ಅತ್ತೆ, ಮಾವ ಯಾರೂ ಬರುವಂತಿರಲಿಲ್ಲ. ವತ್ಸಲೆಯ ದೊಡ್ಡ ನಾದಿನಿ ಮಗನ ತಾಯಿಯಾಗಲು ತವರು ಮನೆಗೆ ಬಂದಿದ್ದಳು, ದಿನ ತುಂಬಿದ್ದ ಮಗ ಳೊಬ್ಬಳನ್ನೇ ಮನೆಯಲ್ಲಿ ಬಿಟ್ಟು ಮದುವೆಗಾಗಿ ತಾಯಿ, ತಂದೆ ಹೊರಡಲು ಸಿದ್ಧರಿರಲಿಲ್ಲ.

ಆದುದರಿಂದಲೇ ವತ್ಸಲೆ ತನ್ನ ಕಿರಿಯ ಅಚ್ಚುಮೆಚ್ಚಿನ ನಾದಿನಿ ಕಲ್ಯಾಣಿಗೆ ಗಂಟುಬಿದ್ದಳು.

"ಅತ್ತೆ, ಮಾವನಂತೂ ಬರೋದಿಲ್ಲ. ಅವರನ್ನ ಬಲವಂತ ಮಾಡಿ ಕರೆಯೋಕೆ ನನಗೂ ಬಾಯಿಲ್ಲ. ನೀನು ಬರೋದಿಲ್ಲಾಂದರೆ ನಾನು ಬಿಡೋದಿಲ್ಲ........"

ಕತ್ತರಿಯಿಂದ ಝುಗುರುಗಳನ್ನು ಕತ್ತರಿಸುತ್ತಿದ್ದ ಕಲ್ಯಾಣಿ ತಲೆ ಎತ್ತದೆ ಕೇಳಿದಳು.

"ನಾನು ಬರದೇ ಇದ್ದರೆ ಏನು ಮಾಡ್ತೀರಿ ?"

"ನಾಲ್ಕೇಟು ಕೊಟ್ಟಾದರೂ ನಿನ್ನ ಮದುವೆಗೆ ಎಳೆದುಕೊಂಡು ಹೋಗ್ತೀನಿ."

"ಅಬ್ಬ! ಗಂಡನ ತಂಗಿಯ ಮೇಲೆ ಎಷ್ಟೊಂದು ಜೋರು ನಿಮ್ಮದು! ತಾಳಿ. ಅಮ್ಮ ಬರಲಿ, ನಿಮಗೆ ಮಾಡಿಸುತ್ತೇನೆ."

"ಸರಿಯಾದ ಅರ್ಥದಲ್ಲಿ ಅತ್ತೆಯ ಸ್ಥಾನಕ್ಕೆ ಬಾಮ್ಮಾಂತ ಹೇಳ್ತೀನಿ. ನಿಮಗೆ 'ಮಾಡಿದ್ದುಣ್ಣೋ ಮಹಾರಾಯ'ದಲ್ಲಿ ಸೀತಮ್ಮನಿಗೆ ಸಿಕ್ಕಿದ್ದಳು ನೋಡಿ, ಅಂತಹ ಅತ್ತೆ ಸಿಕ್ಕಬೇಕಿತ್ತು. ನಮ್ಮಂತಹ ಒಳ್ಳೇ ಜನ ಸಿಕ್ಕಬಾರದಾಗಿತ್ತು. ನಮ್ಮ ಮನೆಗೆ ಬಂದ ಈ ಹೊಸ ಹೆಣ್ಣು ಅಧಿಕಾರ

ಮಾಡೋ ಗತಿ ಬಂದಿದೆ. ನಾನು, ಅಮ್ಮ, ಅಪ್ಪ, ಕೊನೆಗೆ ಮಹಾ ಸಿಡುಕ ನಾದ ಅಣ್ಣ ಎಲ್ಲರೂ ನಿಮ್ಮ ವಶ...."

ವತ್ಸಲೆ ನಾದಿನಿಯ ಮಾತು ಕೇಳಿ ನಕ್ಕಳು.

"ಅಷ್ಟೊಂದು ಮಾತು ಯಾಕೆ ತಾಯಿ, ಈಗೇನು ನೀನು ಬರ್ತೀಯೋ ಇಲ್ವೋ ಹೇಳಿಬಿಡು."

"ಬರೋದಿಲ್ಲಾ....ಬರೋದಿಲ್ಲಾ."

"ಸರಿ ಹಾಗಾದರೆ, ನಾನೂ ಹೋಗೋದಿಲ್ಲಾ" ವತ್ಸಲೆಯ ದನಿಯಲ್ಲಿ ನಿರ್ಧಾರವಿತ್ತು.

"ಚೆನ್ನಾಯ್ತು. ನಾನು ಬರದೇ ಇದ್ದರೆ ನಿಮ್ಮಣ್ಣನ ಮದುವೆ ನಿಂತು ಹೋಗೋದಿಲ್ಲ ತಾನೆ ?"

"ನಾನು ಹೋಗದಿದ್ದರೂ ನಿಲ್ಲೋದಿಲ್ಲ"

"ನೀವು ಮದುವೆಗೆ ಹೋಗಿ ಅಣ್ಣನ ಎಂಜಲು ಬಟ್ಟಲು ತೊಳೆದು, ಸೀರೇನ ಉಡುಗೊರೆಯಾಗಿ ಪಡೆದು...."

"ಬಾರೋ ಇಲ್ಲಿ ಆನಂದ, ತಲೆ ಬಾಚುತ್ತೀನಿ" ವತ್ಸಲೆ ನಾದಿನಿಯ ಮಾತಿಗೆ ಕಿವಿಗೊಡದವಳಂತೆ ತನ್ನ ಮಗುವನ್ನು ಕೂಗಿದಳು.

"ಬಂತು ಕೋಪ ಅತ್ತಿಗೆಗೆ" ಕಲ್ಯಾಣಿ ಕತ್ತರಿಯನ್ನು ತೆಗೆದಿಟ್ಟು ಅತ್ತಿಗೆಯ ಕಡೆ ನೋಡಿದಳು.

ವತ್ಸಲೆ ಮಾತನಾಡಲಿಲ್ಲ.

ಕಲ್ಯಾಣಿ ತನ್ನ ಬಳಿಗೆ ಬಂದ ಆನಂದನನ್ನು ಬಿಗಿಯಾಗಿ ಹಿಡಿದು, ಬಲಗೈಲಿ ಕತ್ತರಿ ತೆಗೆದುಕೊಂಡು ಎಚ್ಚರಿಸುವವಳಂತೆ ಹೇಳಿದಳು.

"ನನ್ನ ಕೈಲಿ ಮಾತನಾಡುತ್ತೀರೋ ಅಥವಾ ಆನಂದನ ತಲೆಗೂದಲು ಕತ್ತರಿಸಿ ಬಿಡಲೋ ?"

ಹರಕೆಯಿದ್ದುದರಿಂದ ಜುಟ್ಟು ಬಿಡಿಸುವವರೆಗೆ ಆನಂದನ ತಲೆಗೂದಲಿಗೆ ಕತ್ತರಿಯನ್ನು ಸೋಕಿಸುವುದು ಮಹಾಪರಾಧವಾಗಿತ್ತು.

ವತ್ಸಲಾ ಗಾಬರಿಗೊಂಡು "ದಮ್ಮಯ್ಯಾಂತೀನಿ. ಕತ್ತರಿ ಅವನ ತಲೆಗೆ ಸೋಕಿಸಬೇಡವೇ " ಎಂದಳು.

"ನನ್ನ ಮಾತನಾಡಿಸುತ್ತೀರಿ ತಾನೆ?"

ಅಷ್ಟರಲ್ಲಿ ವಿಜಯಮ್ಮ ಹಾಲಿನೊಳಗೆ ಬಂದರು. ಮಗಳ ಕೈಲಿದ್ದ ಕತ್ತರಿಯನ್ನೂ, ಅವಳ ಬಳಿ ಸೆರೆಯಾಗಿ ಕುಳಿತಿದ್ದ ಮೊಮ್ಮಗನನ್ನೂ ನೋಡಿ ಸಂದರ್ಭ ಗ್ರಹಿಸಿ ಗದರಿಸಿದರು.

"ಸಾಕು ಹುಡುಗಾಟ. ಬಿಡು ಮಗೂನ"

ಕಲ್ಯಾಣಿ ಆನಂದವನ್ನು ಬಿಟ್ಟಳು. ಅವನು ಹೊರಗೆ ಓಡಿಹೋದ.

"ಏನ್ರೇ ಅದು ಜಗಳ?"

ವತ್ಸಲೆ ನಾದಿನಿಯ ಮೇಲೆ ದೂರು ಹೇಳಿದಳು. ಅವಳ ಮಾತನ್ನು ಕೇಳಿ ವಿಜಯಮ್ಮ,

"ಅದು ಹೇಗೆ ಅವಳು ಹೋಗೋದಿಲ್ಲ ನಾನು ನೋಡ್ತೀನಿ. ಕತ್ತು ಹಿಡಿದು ತಳ್ಳಿಯಾದರೂ ನಾನು ಅವಳನ್ನು ಕಳಿಸ್ತೀನಿ. ನೀನು ಯೋಚನೆ ಮಾಡಬೇಡ" ಎಂದು ಸೊಸೆಗೆ ಸಮಾಧಾನ ಹೇಳಿದರು.

ವತ್ಸಲೆಗೆ ತೃಪ್ತಿಯಾಯಿತು.

"ಈ ಮನೇಲಿ ಅತ್ತಿಗೆ ಕೈಯಲ್ಲಿ ನಾನು ಬೇಯುಲಾರೆ" ಎನ್ನುತಾ ಕಲ್ಯಾಣಿ ಮೇಲೆದ್ದಳು.

"ಎಲ್ಲಿಗೆ ಹೋಗ್ತೀಯಾ ಈ ಬಿಸಲಿನಲ್ಲಿ?" ವತ್ಸಲೆ ಕೇಳಿದಳು.

"ಕೆರೆ ಹುಡುಕಿಕೊಂಡು"

"ಥೂ ಏನು ಮಾತನಾಡ್ತೀಯಮ್ಮಾ. ನಮ್ಮ ಅಮ್ಮಾವರ ಬುದ್ಧಿ ನನಗೆ ಗೊತ್ತಿಲ್ಲವೇ? ಸ್ವೆಟರಿನ ಯಾವುದಾದರೂ ಒಂದು ಪ್ಯಾಟ್ರನ್ ಕಲಿತುಕೊಂಡು ಬರೋಕೆ ಹೋಗ್ತೀಯಾ?"

ಕಲ್ಯಾಣಿ ಮಾತನಾಡದೆ ಉಲ್ಲನ್ ದಾರಗಳಿದ್ದ ಪೆಟ್ಟಿಗೆಯನ್ನು ಕೈಲಿ ಹಿಡಿದು, ಕಾಲಲ್ಲಿ ಚಪ್ಪಲಿ ಮೆಟ್ಟಿ

"ಅಮ್ಮನಿಗೆ ನೀವೇ ಹೇಳಿಬಿಡಿ ನಾನು ಹೋದೇಂತ. ಇನ್ನು ನನ್ನ ಮುಖ ಕಂಡರೆ ಅಮ್ಮ ಏನಾದರೂ ಕೆಲಸ ಹಚ್ತಾಳೆ" ಎಂದಳು.

"ಎಲ್ಲಿಗೆ ಹೊರಟೆಯೇ?" ಎನ್ನುತ್ತಾ ವಿಜಯಮ್ಮ ಒಳಗಿನಿಂದ ಕೂಗಿದರು.

"ವಿವರಗಳಿಗೆ ಅತ್ತಿಗೆಯನ್ನು ವಿಚಾರಿಸು" ಎನ್ನುತ್ತಾ ಕಲ್ಯಾಣಿ ಆತುರದಿಂದ ಹೊರಗೆ ಧಾವಿಸಿದಳು.

ವಿಜಯಮ್ಮ ಹೊರಗೆ ಬಂದು ಮಗಳನ್ನು ಕಾಣದೇ "ಎಲ್ಲಿ ಹೋದಳು? " ಎಂದರು.

"ಇನ್ನೇನು? ಸ್ವೆಟರ್ ಹಾಕೋದನ್ನ ಕಲಿಯೋಕೆ ಹೋಗಿದ್ದಾಳೆ"

"ಸ್ವಲ್ಪ ಅಕ್ಕಿ ಆರಿಸಬೇಕಾಗಿತ್ತು. ಅಕ್ಕೀಲಿ ವಿಪರೀತ ಕಲ್ಲಿದೆ. ಮದುವೆಗೆ ಬಂದ ಹುಡುಗಿ ಇವಳು. ಮನೆಗೆಲಸದಲ್ಲಿ ನಮಗೆ ಒಂದು ಸ್ವಲ್ಪವೂ ನೆರವಾಗೋದಿಲ್ಲ. ಹೀಗಾದರೆ ಇವಳನ್ನು ಕಟ್ಟಿಕೊಂಡವನು ಉದ್ಧಾರವಾದ".

"ಇನ್ನೂ ಹುಡುಗಿ. ಈಗೆರಡು ದಿನ......"

"ಹುಡುಗಿಯೇನು ಬಂತು ಮಣ್ಣು. ಇವಳ ವಯಸ್ಸಿಗೆ ನಾನು ನಿನ್ನ ಗಂಡನ ತಾಯಿಯಾಗಿದ್ದೆ."

ವತ್ಸಲೆ ಬದಲು ಹೇಳಲಿಲ್ಲ. ಅಷ್ಟರಲ್ಲಿ ತರಕಾರಿಯವಳೊಬ್ಬಳು ಹೊರಬಾಗಿಲಿನಲ್ಲಿ ನಿಂತು ವಿಜಯಮ್ಮನ ಗಮನವನ್ನು ಸೆಳೆದಳು.

"ತರಕಾರಿ ಬೇಕೇನ್ರವ್ವಾ? "

"ಏನಿದೆ ?"

ಅವಳು ನಾಲ್ಕಾರು ಬಗೆಯ ತರಕಾರಿಗಳನ್ನು ಹೇಳಿದಳು. ಅಲ್ಲಿಂದ ಚೌಕಾಸಿಗೆ ಪ್ರಾರಂಭವಾಯಿತು.

ವತ್ಸಲೆಯ ಗಂಡ ಅನಂತನಿಗೆ ಚೌಕಾಸಿ ಮಾಡುವುದೆಂದರೆ ಆಗದು.

"ಮೂರ್ಕಾಸು, ಆರು ಕಾಸಿಗೆಲ್ಲಾ ಅವರ ಹತ್ತಿರ ಗಂಟೆಗಟ್ಟಲೆ ಯಾಕೆ ಚರ್ಜೆ? ನೀವು ಆರು ಕಾಸು ಕೊಡೋದರಿಂದ ಬಡವರಾಗೋದಿಲ್ಲ, ಅವರು ಶ್ರೀಮಂತರಾಗೋದಿಲ್ಲ. ವೃಥಾ ವಾದ" ಎಂದು ಅವನು ತಾಯಿಯ ಮೇಲೆ ಆಗಾಗ್ಗೆ ರೇಗುವುದುಂಟು.

'ಕೊಸರು' ಕೇಳುವುದಂತೂ ಅವನ ದೃಷ್ಟಿಯಲ್ಲಿ ಯಾಚಕಕ್ಕಿಂತಲೂ ಹೀನವಾದ ಕೆಲಸ.

ತಾಯಿಯೋ, ಹೆಂಡತಿಯೋ ತರಕಾರಿಯವರೊಡನೆ "ಎರಡು ಕಾಯಿ ಜಾಸ್ತಿ ಹಾಕು" ಎಂದರೆ ಸಾಕು, ಅನಂತ ಕಿಡಿಯಾಗುತ್ತಿದ್ದ. 'ಬೇಕಾದರೆ ಇನ್ನೆರಡಾಣೆ ಜಾಸ್ತಿ ತರಕಾರಿ ಕೊಂಡುಕೊಳ್ಳಿ. ಕೊಸರು ಕೇಳುವುದರಿಂದ ನಿಮಗೇನು ಲಾಭ? '

ಅವನ ಈ ಬುದ್ಧಿ ಕಂಡು ಅತ್ತೆ-ಸೊಸೆ ಒಳಗೊಳಗೇ ಬೇಜಾರು ಪಟ್ಟುಕೊಳ್ಳುತ್ತಿದ್ದರೂ ಬಹಿರಂಗವಾಗಿ ಅವನನ್ನು ಪ್ರತಿಭಟಿಸಲಾರದವರಾಗಿದ್ದರು. ಅನಂತ ಮನೆಯಲ್ಲಿದ್ದರಂತೂ ಅವರು ವ್ಯಾಪಾರ ಮಾಡಲು ಹೆದರುತ್ತಿದ್ದರು. ಅವನು ಮನೆಯಲ್ಲಿಲ್ಲವೆಂದು ಖಾತ್ರಿಮಾಡಿಕೊಂಡೇ ವಿಜಯಮ್ಮ ಚೌಕಾಸಿಗೆ ಆರಂಭಿಸುತ್ತಿದ್ದರು.

ಈ ದಿನ ಅನಂತ ಮನೆಯಲ್ಲಿಲ್ಲವೆಂದು ವಿಜಯಮ್ಮ ಚೌಕಾಸಿಗೆ ಮೊದಲು ಮಾಡಿದರು. ಸುತ್ತಮುತ್ತಲಿನ ಮೂರು ಮನೆಗಳಿಗೆ ಅದು ಕೇಳುತ್ತಿತ್ತು.

ಬೆಳಗಿನ ಜಾವ ಕೋಳಿಯ ಕೂಗಿಗೆ ಬದಲಾಗಿ ನೆರೆಹೊರೆಯವರು ವಿಜಯಮ್ಮನ ಗಂಟಲಿಗೇ ಎಚ್ಚರಗೊಂಡು,

"ಆಗಲೇ ಐದೂವರೆಯಾಗಿರಬೇಕು. ವಿಜಯಮ್ಮ ಎದ್ದಿದ್ದಾರೆ" ಎಂದುಕೊಳ್ಳುತ್ತಿದ್ದರು.

ತಾಯಿಯ ಗಂಟಲನ್ನು ಸುಧಾರಿಸಲು ಅನಂತ ವಿಶ್ವಪ್ರಯತ್ನ ಮಾಡಿ ಕೊನೆಗೆ ಸೋಲನ್ನೊಪ್ಪಿಕೊಂಡು ಸುಮ್ಮನಾಗಿದ್ದ. ತಾಯಿಯ ಪ್ರತಿಯೊಂದು ಮಾತು ಮುಗಿದ ಮೇಲೆ ಅವನು ತಪ್ಪದೆ

"ಮೆಲ್ಲಗೆ ಮಾತಾಡಮ್ಮ" ಎಂದು ಪಲ್ಲವಿ ಹೇಳುತ್ತಿದ್ದ. ಆಕೆ ಎಷ್ಟೇ ಮೆಲ್ಲಗೆ ಮಾತನಾಡಿದರೂ ಮನೆಯಲ್ಲಿ ಗುಡುಗಿದಂತಾಗುತ್ತಿತ್ತು. ಮಗನಿಗಾಗಿ ಆಕೆ ತಮ್ಮನ್ನು ತಿದ್ದಿಕೊಳ್ಳಲು ಯತ್ನಿಸಿ, ಕೊನೆಗೆ ಮಗನಿಗೆ,

"ಹೋಗೋ, ದೇವರು ಕೊಟ್ಟ ಗಂಟಲು—ನಾನು ತಿದ್ದಿದರೆ ಸರಿಯಾಗುತ್ತದೆಯೇ" ಎಂದು ಎಲ್ಲವನ್ನೂ ಅಗೋಚರನಾದ ಭಗವಂತನ ಮೇಲೆ ಹಾಕಿ ನಿಶ್ಚಿಂತರಾಗಿದ್ದರು.

ವ್ಯಾಪಾರದ ಆವೇಶದಲ್ಲಿ ಆಕೆಯ ದನಿಯೇರಿತು. ಇದ್ದಕ್ಕಿದ್ದಂತೆಯೇ ಆಕೆ ಸೊಸೆಯ ಕಡೆ ತಿರುಗಿ

"ವತ್ಸಲಾ, ಅನಂತ ಮನೇಲಿದಾನೇನು?" ಎಂದರು.

"ಹೂಂ. ಮಲಗಿದ್ದರು"

ವಿಜಯಮ್ಮ ರೋಷದಿಂದ ತರಕಾರಿಯವಳ ಕಡೆ ತಿರುಗಿ "ಮೆಲ್ಲಗೆ ಮಾತಾಡಮ್ಮ. ಗಂಡಸರು ಮನೇಲಿದಾರೆ. ಸುಮ್ಮನೆ ಕಿರಿಚಿಕೊಳ್ಳಬೇಡ" ಎಂದರು.

ಅತ್ತೆಯ ಮಾತು ಕೇಳಿ ವತ್ಸಲೆಗೆ ನಗುಬಂತು. ಪಾಪ! ಆ ಬಡ ತರಕಾರಿಯವಳಿಗೆ ಉಸಿರು ಬಿಡಲೂ ಅವಕಾಶ ಕೊಡದೆ ಅತ್ತೆ ಕಿರುಚಾಡಿ ಅವಳಿಗೇ 'ಮೆಲ್ಲಗೆ ಮಾತಾಡು' ಎಂದು ಹೇಳುತ್ತಿರುವುದನ್ನು ಕೇಳಿ ಅವಳಿಗೆ ನಗು ಹಿಡಿಸದಾಯಿತು.

"ಹೂಂ. ಹಾಕು ಇನ್ನೆರಡು ಬದನೇಕಾಯಿ! ನಾಲ್ಕಾಣೆ ಕಾಯಿ ತಗೊಂಡಿದೀನಿ—ಎರಡು ಕಾಯಿ ಹೆಚ್ಚಿಗೆ ಹಾಕು."

ಒಳಗಿನಿಂದ ಅನಂತನ ದನಿ ಕೇಳಿಸಿತು.

"ವತ್ಸಲಾ, ಒಂದು ಲೋಟ ನೀರು."

ಗರುಡ ಮಚ್ಚೆಯನ್ನು ಕಂಡ ಹಾವಿನಂತೆ ವಿಜಯಮ್ಮ ಒಳಗೆ ನುಸುಳಿದರು. ಮತ್ತೆ ಮಗನೆದುರಿಗೆ ಬರುವ ಧೈರ್ಯವಿಲ್ಲದೆ ಒಳಗಿನಿಂದಲೇ ಸೊಸೆಗೆ ಕೂಗಿ ಹೇಳಿದರು.

"ವತ್ಸಲಾ, ಅವಳಿಗೆ ನಾಲ್ಕಾಣೆ ಕೊಟ್ಟು ಕಳಿಸಮ್ಮ."

ಅನಂತ ಹೆಂಡತಿಯ ಮುಖ ನೋಡಿ ನಕ್ಕ. ವತ್ಸಲೆ ತರಕಾರಿಯವಳಿಗೆ ದುಡ್ಡು ಕೊಟ್ಟು ಕಳುಹಿಸಿದಳು.

"ಸ್ವಲ್ಪ ಹೊತ್ತಿಗೆ ಮುಂಚೆ ಅತ್ತಿಗೆ ನಾದಿನಿಯರಿಗೆ ಜಗಳವಾಗಿತ್ತು. ಈಗ ಅಮ್ಮನಿಗೂ, ತರಕಾರಿಯವಳಿಗೂ ಯುದ್ಧ."

"ಯುದ್ಧ ಅಲ್ಲವೇ ಅಲ್ಲ ಇದು. ನಿರಪರಾಧಿಯಾದ ಅವಳ ಮೇಲೆ ನಿಮ್ಮಮ್ಮನ ಆಕ್ರಮಣ! ನೋಡಿ, ಕಲ್ಯಾಣಿ ಸುಬ್ಬಣ್ಣನ ಮದುವೇಗೆ ಬರೋದಿಲ್ಲಾಂತ ಹಠ ಹಿಡಿದಿದಾಳೆ"

"ಬರದಿದ್ದರೆ ಬೇಡ" ಎಂದ ಅನಂತ ಒಂದೇ ಮಾತಿನಲ್ಲಿ.

"ಸುಂಕದವನ ಹತ್ತಿರ ಸುಖ ದುಃಖ ಹೇಳಿಕೊಂಡ ಹಾಗೆ, ನಾನು ನಿಮ್ಮ ಹತ್ತಿರ ಏನಾದರೂ ಹೇಳಿಕೊಳ್ಳೋದು ಎಂದರೆ. ಅತ್ತೆ, ಮಾವ, ಸರೋಜ ಯಾರೂ ಬರೋದಿಲ್ಲ. ನಾನೊಬ್ಬಳೇ ಇಲ್ಲಿಂದ ತಬ್ಬಲಿ ಹಾಗೆ..."

"ತಬ್ಬಲಿ! ನಾನು ಬರ್ತೀನಲ್ಲೇ ನಿನ್ನ ಜೊತೆ—ತಾಳಿ ಕಟ್ಟಿದವನು. ಆನಂದ ಬರ್‍ತಾನೆ, ಅನಂತ ಬರ್‍ತಾನೆ. ನಮ್ಮಿಬ್ಬರಿಗಿಂತಲೂ...."

"ಕಲ್ಯಾಣೀನೂ ಬಂದರೆ ಚೆನ್ನ"

"ಹಾಗಾದರೆ ಕೈಕಾಲು ಕಟ್ಟಿಕೊಂಡು ಹೋಗೋಣಾಂತೀಯೇನು?"

ವಿಜಯಮ್ಮ ಕುಳಿತಲ್ಲಿಂದಲೇ ಕೂಗಿ ಹೇಳಿದರು "ಕಲ್ಯಾಣೀನ ನಿನ್ನ ಜೊತೆ ಕಳಿಸುವ ಜವಾಬ್ದಾರಿ ನಂದು."

ಅನಂತ ಎಂದಿನಂತೆ ತಾಯಿಯ ಮಾತು ಮುಗಿದ ಕೂಡಲೇ ಪಲ್ಲವಿ ಹಾಡಿದ "ಮೆಲ್ಲಗೆ ಮಾತಾಡಮ್ಮ".

"ಹೋಗೋ ಮೂಳ. ಕೈಹಿಡಿದ ಗಂಡನಿಗೆ, ಅತ್ತೆ, ಮಾವನಿಗೆ ಹೆದರಲಿಲ್ಲ. ಈಗ ನಿನಗೆ ಹೆದರಬೇಕಾಗಿದೆ" ಆಕೆ ಸಿಡುಕಿದರು.

"ಮೆಲ್ಲಗೆ ರೇಗಮ್ಮ. ಗಂಡಸರು ಮಲಗಿದಾರೆ" ಎಂದ ಅನಂತ. ವತ್ಸಲೆಗೆ ಈಗ ಮಾತ್ರ ನಗು ತಡೆಯದಾಯಿತು. ಅವಳು ಅತ್ತೆ ಏನು ತಿಳಿದುಕೊಂಡಾರೆಂಬ ಭಯವಿಲ್ಲದೆ ಮನಃಪೂರ್ತಿಯಾಗಿ ನಕ್ಕಳು.

ಕಲ್ಯಾಣಿ ಬಿಸಲಿನಲ್ಲಿ ಅಲೆದಾಡಿ ಮುಖವೆಲ್ಲಾ ಕೆಂಪಗೆ ಮಾಡಿಕೊಂಡು ಒಳಗೆ ಬಂದಳು.

'ಏನತ್ತಿಗೆ, ಅಷ್ಟೊಂದು ನಗೋದು!"

"ನಿಮ್ಮ ಅತ್ತಿಗೆ ಮುಂದೆ ಈಗ ಮತ್ತೊಂದು ಸಮಸ್ಯೆ ಇದೆ. ಅದನ್ನ ನೀನೇ ಪರಿಹಾರ ಮಾಡಬೇಕು. ನೀನ್ಯಾಕೆ ಸುಬ್ಬಣ್ಣನ ಮದುವೇಗೆ ಬರೋದಿಲ್ಲಾಂತೀಯ? " ಅನಂತ ಕೇಳಿದ

'ಮೊದಲನೆಯದಾಗಿ ನನಗೆ ಬಸ್ಸಿನ ಪ್ರಯಾಣ ಬೇಜಾರು. ಎರಡನೆಯದಾಗಿ ಮದುವೆಯ ಮನೆ ಗದ್ದಲ ಬೇಜಾರು. ವಾಲಗದವರು ಬೆಳಗ್ಗೆ ನಾಲ್ಕು ಗಂಟೆಗೆ ಎಬ್ಬಿಸುತ್ತಾರೆ. ಆ ಮೇಲೆ ಪ್ರತಿಯೊಂದಕ್ಕೂ 'ಕ್ಯೂ' ನಿಲ್ಲಬೇಕು. ಹೊತ್ತಿಗೆ ಸರಿಯಾಗಿ ಊಟ, ನಿದ್ದೆ ಇರೋದಿಲ್ಲ. ಇವೆಲ್ಲಕ್ಕೆ ಕಳಶವಿಟ್ಟ ಹಾಗೆ ಉಡುಪೀಲಿ ನೋಡೋವೇನಿಲ್ಲ."

"ಪದ್ದೀ, ಉಡುಪೀಲಿ ಸಮುದ್ರ ಇದೆ ಕಣೆ. ಆಮೇಲೆ ಕೃಷ್ಣನ ದೇವಸ್ಥಾನವಿದೆ, ಆಮೇಲೆ ಕಾಲೇಜಿದೆ...."

"ಈ ಊರಿನಲ್ಲೂ ಇದೆಯಲ್ಲಾ ಕಾಲೇಜು, ಒಂದಲ್ಲಾಂತ ಐದಾರು. ಆ ಕಾಲೇಜು ನೋಡೋಕೆ ಉಡುಪೀಗೆ ಹೋಗಬೇಕೆ? "

"ಕಾಲೇಜು ಬೇಡ ಬಿಡು. ಸಮುದ್ರ? "

"ಸಮುದ್ರಾನ ಕಾಲೇಜಿನಷ್ಟು ಸುಲಭವಾಗಿ ಬಿಡೋಕಾಗೋದಿಲ್ಲ. ಆದರೆ ಒಂದು ಕಂಡೀಷನ್ನು. ನಾನು ಸಮುದ್ರದ ಹತ್ತಿರ ಎಷ್ಟು ಹೊತ್ತು

ದ್ದರೂ ನೀವು ಯಾರೂ ಬೈಯಬಾರದು."

"ಆಗಲಿ" ಅನಂತನೆಂದ.

"ಸರಿ. ಹಾಗಾದ್ರೆ ಬರ್‍ತೀನಿ" ಎಂದಳು ಕಲ್ಯಾಣಿ. ನಾದಿನಿಯೂ ತಮ್ಮೊಡನೆ ಬರುವಳೆಂದು ತಿಳಿದು ವತ್ಸಲೆ ಹಿಗ್ಗಿದಳು. ಆದರೆ ತಾನು ಗೆಲ್ಲಲಾರದ ಕಡೆ ಅನಂತ ಗೆದ್ದಿರುವುದನ್ನು ನೋಡಿ ಅವಳಿಗೆ ಕೊಂಚ ಕೋಪ ಬಂತು.

"ಅದೇ ಇರೋದು ಜಾಣತನ" ಎಂದು ಅನಂತ ಹೆಮ್ಮೆಕೊಚ್ಚಿಕೊಂಡ.

"ನಾನು ಕಳಿಸುತ್ತಿದ್ದೆ ಅವಳನ್ನ" ಎಂದರು ವಿಜಯಮ್ಮ.

"ಸದ್ಯ! ಅಮ್ಮನ ದನಿಯಿಂದ ನನಗೆ ನಾಲ್ಕಾರು ದಿನ ವಿಶ್ರಾಂತಿ" ಎಂದಳು ಕಲ್ಯಾಣಿ.

"ನಿಮಗೆಲ್ಲಾ ನನ್ನ ಗಂಟಲಿನ ಮೇಲೆ ಕಣ್ಣು" ಎಂದು ವಿಜಯಮ್ಮ ಸಿಡುಕಿದರು.

"ಅಮ್ಮಾ, ಮೆಲ್ಲಗೆ; ಗೋಡೆ ಅಲುಗಾಡಿದ ಹಾಗಾಯಿತು".

ಮದುವೆಗೆ ಕಲ್ಯಾಣಿ ಹೊರಡುವುದು ನಿಶ್ಚಯವಾಯಿತು. ತಾನು ಮದುವೆಗೆ ಹೋಗುವುದು ನಿಶ್ಚಯವಾಗಿದ್ದರೂ ಅವಳು ದಿನಕ್ಕೆರಡು ಬಾರಿ ಅತ್ತಿಗೆಯ ಬಳಿ ಹೋಗಿ

"ಅತ್ತಿಗೆ, ದಿವಸಕ್ಕೆ ನಾಲ್ಕೈದು ಸಲ ಡ್ರೆಸ್ಸು ಬದಲಾಯಿಸೋಕೆ ನನಗೆ ಬೇಜಾರು. ದಿವಸಕ್ಕೆ ಮೂರು ಸಲ ಜಡೆ ಹೆಣೆದು, ಹೂ ಮುಡಿದು ಮೇಕಪ್ ಮಾಡಿಕೊಳ್ಳೋಕೆ ಬೇಜಾರು. ಈಗಲೂ ನಾನು ಬರೋದನ್ನ ರದ್ದುಗೊಳಿಸಲೇ?" ಎನ್ನುತ್ತಿದ್ದಳು.

ನಾದಿನಿಯ ತೂಗುಮನಸ್ಸು ವತ್ಸಲೆಗೆ ಅಭ್ಯಾಸವಾಗಿತ್ತು. ಆದುದರಿಂದ ಅವಳು ಸ್ವಲ್ಪವೂ ಬೇಸರಪಟ್ಟುಕೊಳ್ಳದೇ,

"ನಿನಗೆ ಸೀರೆ ನಾನೇ ಉಡಿಸ್ತೀನಿ. ಜಡೆ ಹೆಣೆದು ನಾನೇ ಮೇಕಪ್ ಮಾಡ್ತೀನಿ" ಎನ್ನುತ್ತಿದ್ದಳು.

"ನಿಮಗೆ ಸೀರೆ ಚೆನ್ನಾಗಿ ಉಡಿಸೋಕೆ ಬರೋದಿಲ್ಲ. ನೆರಿಗೆಗಳು ಚೆಲ್ಲಿಕೊಂಡು ಹರಡಿರುವ ಬದಲು ಮುದುರಿ ಮೂಟೆ ಕಟ್ಟಿಬಿಡ್ತೀರಿ. ನೀವು ಉಟ್ಟುಕೋತೀರಲ್ಲ ಬಲು ಮನೋಹರವಾಗಿ...."

ಆಗ ವತ್ಸಲೆ ನಸುಮುನಿಸಿನಿಂದ "ಇನ್ನು ನನಗೇನಾಗಬೇಕಾಗಿದೇಮ್ಮ? ನನಗೆ ಮದುವೆ ಮಂಗಳ ಎಲ್ಲ ಆಯ್ತಲ್ಲ. ಇನ್ನು ಉಡುಪಿಗೆ ಗಮನ ಕೊಡುವ ಕಾಲ ಕಳೆದುಹೋಯಿತು" ಎಂದಳು.

"ಆದರೆ ನನಗಿನ್ನೂ ಮದುವೆ ಆಗಿಲ್ಲವಲ್ಲ. ಒಬ್ಬ ಹುಡುಗನ್ನ ಬಲೇಗೆ ಹಾಕಿಕೊಳ್ಳುವವರೆವಿಗೆ ಸ್ವಲ್ಪ ಉಡುಪು ಅಲಂಕಾರ ಬೇಕಲ್ಲ?"

ವತ್ಸಲೆ ನಾದಿನಿಯ ಮಾತಿಗೆ ಹೆಚ್ಚು ಬೆಲೆಯೇ ಕೊಡುತ್ತಿರಲಿಲ್ಲ. ಮನಸ್ಸಿಗೆ ಬಂದಂತೆ ಮಾತನಾಡುವ ಆವಳ ಸ್ವಭಾವ ವತ್ಸಲೆಗೆ ತಿಳಿದಿತ್ತು. ಕಲ್ಯಾಣಿಯ ಮಾತಿನಲ್ಲಿ ಹುರುಳು, ಅರ್ಥ ಸಾಧಾರಣವಾಗಿ ಇರುತ್ತಿರಲಿಲ್ಲ.

ಮದುವೆಗೆ ಎರಡು ದಿನ ಮುಂಚಿತವಾಗಿ ಬೆಂಗಳೂರಿನಿಂದ ವತ್ಸಲೆಯ ತವರು ಮನೆಯವರು ಬಸ್ಸೊಂದನ್ನು ಗೊತ್ತು ಮಾಡಿಕೊಂಡು ಬರುವುದಾಗಿ ಮೊದಲೇ ಕಾಗದ ಬರೆದಿದ್ದರು. ಸಂಜೆ ಊಟ ಮಾಡಿ ಮಲಗಿದ್ದು ಮಾರನೆಯ ದಿನ ಕಾಫಿ ತಿಂಡಿ ತೆಗೆದುಕೊಂಡು ಮೈಸೂರಿನಿಂದ ಬರುವವರನ್ನೂ ಕರೆದುಕೊಂಡು ಹೊರಡುವುದಾಗಿ ಅವರು ತಿಳಿಸಿದ್ದರು.

ತವರು ಮನೆಯವರು ಬರುವರೆಂದು ವತ್ಸಲೆಗೆ ಎಲ್ಲಿಲ್ಲದ ಸಂಭ್ರಮ. ಒಂದು ವಾರದಿಂದಲೂ ಅವಳು ಮನೆಯನ್ನು ಶೃಂಗರಿಸಿ, ಓರಣ ಮಾಡುವುದರಲ್ಲೇ ಕಾಲ ಕಳೆಯುತ್ತಿದ್ದಳು. ಆಗಾಗ್ಗೆ ತನ್ನ ಸಂಭ್ರಮವನ್ನು ಮಗನೊಡನೆ ಹಂಚಿಕೊಳ್ಳುವ ಸಲುವಾಗಿ

"ಆನಂದ, ನಾಳೆ ತಾತ, ಅಜ್ಜಿ, ಮಾವ, ಬರ್ತಾರೆ ಕಣೋ" ಎನ್ನುತ್ತಿದ್ದಳು.

"ಯಾವ ತಾತ?"

"ಬೆಂಗಳೂರು ತಾತ"

ಆನಂದನಿಗೆ ಬೆಂಗಳೂರಿನ ತಾತ, ಅಜ್ಜಿ ಅಷ್ಟೇನೂ ಬಳಕೆಯಲ್ಲಿರಲಿಲ್ಲವಾದ್ದರಿಂದ ಅವರಲ್ಲಿ ಅವನಿಗೆ ಹೆಚ್ಚು ಅಭಿಮಾನವಿರಲಿಲ್ಲ. ತಾಯಿಯ ಉತ್ಸಾಹಕ್ಕೆ ತಣ್ಣೀರೆರಚುವ ಹಾಗೆ ಅವನು ಮೌನವಾಗಿದ್ದುಬಿಡುತ್ತಿದ್ದ.

ಕಲ್ಯಾಣಿ ಯಾವ ರೀತಿಯಿಂದಲೂ ಅತ್ತಿಗೆಗೆ ಸಹಾಯ ಮಾಡಲು ಹೋಗುತ್ತಿರಲಿಲ್ಲ. ಅತ್ತಿಗೆ ವೃಥಾ ಮೈ ಕೈ ನೋಯಿಸಿಕೊಳ್ಳುತ್ತಿರುವ

ರಿಂದೇ ಅವಳ ಭಾವನೆ. ವತ್ಸಲೆ ತಾನಾಗಿಯೇ ಅವಳನ್ನು ಸಹಾಯಕ್ಕೆ ಕರೆದರೆ ಕಲ್ಯಾಣಿ,

"ಬಿಡಿ ಅತ್ತಿಗೆ. ಇನ್ನೊಬ್ಬರಿಗೋಸ್ಕರ ಮನೇನ ನಾವ್ಯಾಕೆ ಸಿಂಗರಿಸಬೇಕು? ಅವರೇನು ನಮ್ಮನ್ನ ಕೇಳೋದಿಲ್ಲವಲ್ಲಾ–ನೀವ್ಯಾಕೆ ಮನೇನ ಇಷ್ಟು ಕೊಳಕಾಗಿಟ್ಟುಕೊಂಡಿದೀರೀಂತ?" ಎಂದುಬಿಡುತ್ತಿದ್ದಳು.

"ಈ ಮೇಜು ಸ್ವಲ್ಪ ಹಿಡುಕೋ ಬಾರೆ"

"ಅಂತೂ ನಿಮ್ಮಣ್ಣನ ಮದುವೆ ಈ ಮೇಜನ್ನು ಹಿಡಿದು ಜರುಗಿಸುವುದರ ಮೇಲೆ ನಿಂತಿದೇನ್ನಿ"

"ಬರ್‍ತೀಯೋ ಇಲ್ವೋ?"

"ನಿಮ್ಮಣ್ಣನಿಗೆ ಹೆಣ್ಣು ಕೊಡುವ ಅತ್ತೆ ಸಹಿತ ಈಗ ನೀವು ಪಡ್ತೀರೋ ಅಷ್ಟು ಕಷ್ಟಪಟ್ಟಿರಲಾರರು."

ವಿಜಯಮ್ಮ ಬಟ್ಟೆ ಹರವಲು ಬಂದವರು ಎಂದಿನಂತೆಯೇ ತಮ್ಮ ಕಂಚಿನ ಕಂಠದಲ್ಲಿ ಗುಡುಗಿದರು.

"ಸಾಕೇ ನಿನ್ನ ಚರ್ಚೆ. ಅತ್ತಿಗೇಂದ್ರೆ ಸ್ವಲ್ಪವೂ ಗೌರವ ಬೇಡ? ಮಾತಿಗೆ ಮಾತು ಜೋಡಿಸ್ತಾಳೆ ಕೂತ್ಕೊಂಡು."

ಕಲ್ಯಾಣಿ ತಟ್ಟನೆ ಎದ್ದು ನಿಂತು ತಾಯಿಯ ಎದುರಿಗೆ ಕೈ ಮುಗಿದು ನಿಂತು,

"ಅಮ್ಮಾ, ನಿನ್ನ ದಮ್ಮಯ್ಯ. ನೀನು ಇನ್ನೇನೂ ಹೇಳಬೇಡ. ನೀನು ಹೇಳಿದ ಹಾಗೆ ಕೇಳ್ತೀನಿ" ಎಂದಳು.

ವಿಜಯಮ್ಮ ಆಗ ತಾನೇ ಒಳಗೆ ಬಂದ ಗಂಡನ ಕಡೆ ತಿರುಗಿ "ಮಗಳು ನಾಟಕ ಆಡ್ತಿದಾಳೆ. ನೋಡಿದಿರೇನು?" ಎಂದರು.

"ನೀನು ನೋಡಿ ಸಂತೋಷಪಡು. ನಂದೇನು ಲೆಕ್ಕ?" ಎಂದರು ಆತ.

ವೆಂಕಟಾಚಲಯ್ಯನವರು ಹೆಂಡತಿಗೆ ಹೆದರಿ ನಡುಗುವ ಪ್ರಾಣಿ ಎಂದು ಎಲ್ಲೆಲ್ಲೂ ಪ್ರಸಿದ್ಧರಾಗಿದ್ದರು. ಅವರಿಗೆ ಸ್ವಂತ ಅಭಿಪ್ರಾಯ, ಯೋಚನೆ, ಆಸೆ, ಆಕಾಂಕ್ಷೆಗಳು ಯಾವುವೂ ಇರಲಿಲ್ಲ. ವಿಜಯಮ್ಮ ಹೇಳಿದುದಕ್ಕೆಲ್ಲಾ ಅವರು ಕೋಲೆ ಬಸವನ ಹಾಗೆ ತಲೆದೂಗುತ್ತಿದ್ದರು. ಅದರಲ್ಲೂ ವಿಜಯಮ್ಮ ಮಾತನಾಡಲು ತೊಡಗಿದರೆಂದರೆ ವೆಂಕಟಾ

ಚಲಯ್ಯ ಮನಸ್ಸಿನಲ್ಲಿಯೇ ಶ್ರೀರಾಮನಾಮವನ್ನು ಜಪಿಸುತ್ತಾ ಕುಳಿತು ಬಿಡುತ್ತಿದ್ದರು. ಆಗ ರಾಮಸ್ಮರಣೆಯನ್ನು ಗಟ್ಟಿಯಾಗಿ ಮಾಡುವ ಧೈರ್ಯವೂ ಅವರಿಗಿರುತ್ತಿರಲಿಲ್ಲ. ಒಂದು ಪಕ್ಷ ಅವರು ಮಾಡಿದ್ದರೂ ವಿಜಯಮ್ಮನ ಭೇರಿನಾದದ ಮುಂದೆ ಅವರ ಕೀಚಲುದನಿ ಸಾಗರದಲ್ಲೊಂದು ಹನಿ ಬಿದ್ದಂತೆ ಐಕ್ಯವಾಗಿ ಬಿಡುತ್ತಿತ್ತು. ಆಕೆ ಹೇಳುವುದನ್ನೆಲ್ಲಾ ಹೇಳಿ ಮುಗಿಸಿ ಕೊನೆಯಲ್ಲಿ 'ಏನಂತೀರಿ' ಎಂದು ಗಂಡನನ್ನು ತಿವಿಯುವವರಂತೆ ಕೇಳಿದಾಗ ಆತ ಎಚ್ಚರಗೊಂಡು,

"ಅನ್ನೋದೇನು?" ಎಂದು ಒಂದು ಅಸಹಾಯಕ ನಗೆಯಲ್ಲಿ ತಮ್ಮೆಲ್ಲ ಅಭಿಪ್ರಾಯವನ್ನೂ ತೇಲಿಸಿ ಬಿಡುತ್ತಿದ್ದರು.

ವೆಂಕಟಾಚಲಯ್ಯ 'ನಂದೇನು ಲೆಕ್ಕ?' ಎಂದಾಗ ಅದೇಕೋ ವಿಜಯಮ್ಮನಿಗೆ ಕೋಪ ಬಂತು.

"ನೀವೇನು, ಈ ಮನೇಲಿ ಯಾವ ಲೆಕ್ಕಕ್ಕೂ ಇಲ್ಲಾನ್ನುವ ಹಾಗೆ ಮಾತನಾಡ್ತೀರಲ್ಲಾ?"

"ಛೇ ಛೇ ಹಾಗಲ್ಲ. ಈಗ ಅಡಿಗೇಗೆ ಅಕ್ಕಿ ಹಾಕುವಾಗ ನೀನು ನನ್ನೂ ಲೆಕ್ಕಕ್ಕೆ ತಗೊಳ್ಳೋದಿಲ್ಲವೇ? ಮೊನ್ನೆ ಸೆನ್ಸಸ್‌ನವರು ಬಂದಿದ್ದಾಗ ನೀನು ನನ್ನ ಹೆಸರೂ ಕೊಟ್ಟಿತಾನೆ?"

ಪತಿಯ ದನಿಯಲ್ಲಡಗಿದ್ದ ವ್ಯಂಗ್ಯ ಗುರುತಿಸಿ ವಿಜಯಮ್ಮ ಮತ್ತಷ್ಟು ಆವೇಶಗೊಂಡು,

"ಹೌದು. ಈ ಮನೇಲಿ ನಾನೇ ರಾಕ್ಷಸಿ. ನೀವು ಋಷಿಗಳು. ನನ್ನಿಂದ ನಿಮಗೆ ತುಂಬಾ ಹಿಂಸೆಯಾಗಿದೆ" ಎಂದರು.

"ಋಷಿಯಾಗಿ ಕಾಡಿನಲ್ಲಿ ತಪಸ್ಸುಮಾಡುವ ಪುಣ್ಯ ನನಗೆಲ್ಲಿದೆ? ಅದಕ್ಕೂ ಕೇಳಿಕೊಂಡಿರಬೇಕು."

ವಿಜಯಮ್ಮ ಧಡಧಡನೆ ಗಂಡನ ಮುಂದೆ ಬಂದು ನಿಂತು ಕೈ ಜೋಡಿಸಿ,

"ಬೀಗರು ಬಂದಾಗ ಅವರೆದುರಿಗೆ ಹೀಗೆಲ್ಲಾ ಮಾತನಾಡಬೇಡಿ. ಅದೊಂದು ದಿನ ಗಂಭೀರವಾಗಿರಿ. ನನ್ನ ಮಾತು ಅಷ್ಟು ನಡೆಸಿಕೊಡಿ" ಎಂದರು.

ಅತ್ತಿಗೆಗೆ ಏನೋ ಸಹಾಯಮಾಡುತ್ತಿದ್ದ ಕಲ್ಯಾಣಿ ಹೊರಗೆ ಬಂದು "ಅಮ್ಮಾ, ಈಗ ನೀನು ನಾಟಕ ಆಡ್ತಿದೀಯಾ" ಎಂದಳು.

ಅನಿರೀಕ್ಷಿತವಾಗಿ ಮಗಳು ಬಂದುದನ್ನು ಕಂಡು ವಿಜಯಮ್ಮ ಒಟ ಗುಟ್ಟುತ್ತಾ ಒಳಗೆ ಹೋದರು.

"ಅಪ್ಪ, ಅಭಿನಂದನೆಗಳು" ಎಂದವಳೇ ಕಲ್ಯಾಣಿ ವರಾಂಡದಲ್ಲಿದ್ದ ಚಪ್ಪಲಿ ಮೆಟ್ಟಿಕೊಂಡು ಮೂರು ಮೆಟ್ಟಲುಗಳನ್ನೂ ಒಟ್ಟಿಗೆ ಹಾರಿ ನಿಮಿಷ ಮಾತ್ರದಲ್ಲಿ ಅದೃಶ್ಯಳಾದಳು.

ಮಾರನೆಯ ದಿನ ಸಂಜೆ ಐದು ಗಂಟೆಯ ವೇಳೆಗೆ ಬೆಂಗಳೂರಿನಿಂದ ಬಸ್ಸು ಬಂತು. ಬೆಂಗಳೂರಿನ ನೆಂಟರನ್ನೆಲ್ಲಾ ಕಲೆ ಹಾಕಿಕೊಂಡು ವತ್ಸಲೆಯ ತಾಯಿ, ತಂದೆ ಬಂದಿದ್ದರು.

ವತ್ಸಲೆಯ ಆಗ್ರಹಕ್ಕೆ ತಲೆಬಾಗಿ ಕಲ್ಯಾಣಿ ಬಸ್ಸು ಬಂದಾಗ ಮನೆಯಲ್ಲಿಯೇ ಇದ್ದಳು.

ಆನಂದನಿಗೆ ತಾತ, ಅಜ್ಜಿಗಿಂತಲೂ ತಮ್ಮ ಮನೆಯ ಮುಂದೆ ನಿಂತಿದ್ದ ಬಸ್ಸಿನಲ್ಲಿ ಹೆಚ್ಚು ಆಸಕ್ತಿ, ಶ್ರದ್ಧೆ ಮೂಡಿದ್ದವು.

ಬೀಗರು ಬಂದಿರುವ ಸಂಭ್ರಮ ವಿಜಯಮ್ಮನಿಗೆ. ಅವರು ಎಂದಿನಂತೆಯೇ ಮಗ, ಸೊಸೆಗೆ ತಿಂಡಿ, ಕಾಫಿ ಸರಬರಾಜು ಮಾಡಲು ಕೂಗಿ ಹೇಳುತ್ತಿದ್ದರು.

ಕಲ್ಯಾಣಿಗೆ ಗದ್ದಲವೆಂದರೆ ಆಗದು. ನಾಲ್ಕಾರು ಜನ ಸೇರಿ ಮಾತನಾಡಿದರೆ ಅವಳಿಗೆ ಅದು ಹಿತವಾಗದು. ಅವಳು ಗದ್ದಲ, ಕೆಲಸದಿಂದ ದೂರವಾಗಲು ಆನಂದನನ್ನು ಎತ್ತಿಕೊಂಡು ಬಸ್ಸನ್ನು ತೋರಿಸುತ್ತಾ ರಸ್ತೆಯಲ್ಲಿ ನಿಂತಳು.

ಆನಂದ ಬಸ್ಸನ್ನೇರಲು ಹಠ ಮಾಡಿದ. ಸಾಲದುದಕ್ಕೆ ಒಳಗಿನಿಂದ ವಿಜಯಮ್ಮ

'ಕಲ್ಯಾಣೀ' ಎಂದು ಕೂಗಿದರು.

ಇನ್ನು ತನ್ನನ್ನು ಕೆಲಸಕ್ಕೆ ಕರೆಯುವರೆಂದು ಹೆದರಿ ಕಲ್ಯಾಣಿ ಆನಂದನನ್ನೂ ಎತ್ತಿಕೊಂಡು ಬಸ್ಸನ್ನೇರಿ ಮರೆಯಾಗಿ ಕುಳಿತಳು. ಆನಂದ ಅವಳಿಗೆ ಬಸ್ಸಿನ ಬಗ್ಗೆ ಸಾವಿರಾರು ಪ್ರಶ್ನೆಗಳನ್ನು ಹಾಕಿದ. ಕಲ್ಯಾಣಿ

ತನಗೆ ತಿಳಿದಂತೆ ಅವನಿಗೆ ಉತ್ತರ ಕೊಡುತ್ತಿದ್ದಳು.

ಇದ್ದಕ್ಕಿದ್ದಂತೆಯೇ ಬಸ್ಸಿನ ಬಾಗಿಲನ್ನು ಧಡಕ್ಕನೆ ತೆಗೆದಂತಾಯಿತು. ಕಲ್ಯಾಣಿ ಗಾಬರಿಯಾಗಿ ನೋಡಿದಳು.

ಬಾಗಿಲನ್ನು ತೆಗೆದುಕೊಂಡು ಒಬ್ಬ ತರುಣ ಬಸ್ಸನ್ನೇರಿದ. ಅವನೂ ಕಲ್ಯಾಣಿಯನ್ನು ನೋಡಿ ಕೊಂಚ ಅಪ್ರತಿಭನಾದ. ಬಸ್ಸಿನಲ್ಲಿ ಯಾರೂ ಇಲ್ಲವೆಂದೇ ಅವನು ಅಲ್ಲಿಗೆ ಬಂದಿದ್ದ.

ಕಲ್ಯಾಣಿ ಯಾರೆಂದು ಅವನಿಗೆ ತಿಳಿಯಲಿಲ್ಲ. ನೆಂಟರು ಮನೆಯಲ್ಲಿ ಬಂದಿಳಿದ ಮರುಗಳಿಗೆಯೇ ಕಲ್ಯಾಣಿ ತಲೆ ಮರೆಸಿಕೊಂಡಿದ್ದಳು.

ಆತ ಒಂದು ಗಳಿಗೆ ಅನುಮಾನಪಟ್ಟ—ಬಸ್ಸಿನಲ್ಲಿ ಏನಾದರೂ ಸಾಮಾನು ಸಿಕ್ಕಿದರೆ ಕದಿಯೋಣಾಂತ ಬಂದಿರಬಹುದೇ ?

ಹುಡುಗಿ ನೋಡಲು ವಿದ್ಯಾವತಿಯಂತಿದ್ದಾಳೆ! ಬೆಲೆ ಬಾಳುವ ಉಡುಪು ಧರಿಸಿದ್ದಾಳೆ!

ಕಲ್ಯಾಣಿಗೆ ಆತ ಮದುವೆಗಾಗಿ ಬಂದವರಲೊಬ್ಬರು ಎಂದು ಕೂಡಲೇ ತಿಳಿಯಿತು.

"ಯಾರಮ್ಮ ನೀವು ?"

ತರುಣನಿಗಿನ್ನೂ ಅವಳ ಬಗ್ಗೆ ಅನುಮಾನ.

"ನಾವೂ ಇಲ್ಲಿಯವರೇ. "

"ಎಲ್ಲಿದೀರಿ ?"

"ಈ ಮನೇಲಿ" ಎನ್ನುತ್ತಾ ಕಲ್ಯಾಣಿ ತಮ್ಮ ಮನೆಯ ಕಡೆ ಕೈ ತೋರಿಸಿದಳು.

"ಸಾರಿ, ನನಗೆ ತಿಳಿಯಲಿಲ್ಲ" ಎನ್ನುತ್ತಾ ಅವನು ನಕ್ಕ. ನಗುವಾಗ ಅವನ ಮುಖ ತುಂಬಾ ಚಿಕ್ಕ ಹುಡುಗನ ಮುಖದಂತೆ ಕಾಣುತ್ತಿತ್ತು.

"ಪರವಾಗಿಲ್ಲ. ಆನಂದ ಬಸ್ಸು ತೋರಿಸು ಎಂದ. ಅದಕ್ಕಾಗಿ ಕರೆದುಕೊಂಡು ಬಂದೆ. ಬಾರೋ ಆನಂದ ನಾವು ಹೋಗೋಣ."

"ನಾನು ಬಂದಿದ್ದರಿಂದ ತಮಗೆ ತೊಂದರೆಯಾಗಲಿಲ್ಲವಷ್ಟೆ? ಅಲ್ಲಿ ಹಿರಿಯರ ಎದಿರು ಸಿಗರೇಟು ಸೇದಲು ಸಂಕೋಚವಾಯಿತು. ಕಾಫಿ, ತಿಂಡಿಯಾದ ತಕ್ಷಣ ಒಂದು ಸಿಗರೇಟು ಸೇದುವ ಅಭ್ಯಾಸ ನನ್ನದು. ಅದು

ದರಿಂದ ಬಸ್ಸಿನಲ್ಲಿ ಯಾರೂ ಇಲ್ಲಾಂತ ತಿಳಿದು ನಿರ್ಭಯವಾಗಿ ಸೇದಲು ಇಲ್ಲಿಗೆ ಬಂದೆ......"

ಎನ್ನುತ್ತಾ ಅವನು ಸಿಗರೇಟು, ಕಡ್ಡಿಪೆಟ್ಟಿಗೆ ಹೊರಗೆ ತೆಗೆದು ಅನುಮತಿ ಪಡೆಯುವವನಂತೆ ಕಲ್ಯಾಣಿಯ ಕಡೆ ನೋಡಿದ.

"ಧಾರಾಳವಾಗಿ" ಎಂದಳು ಕಲ್ಯಾಣಿ ರಾಗವಾಗಿ.

"ಕಲ್ಯಾಣೀ....ಕಲ್ಯಾಣೀ" ಎಂದು ವಿಜಯಮ್ಮ ಮನೆಯಿಂದ ಗಟ್ಟಿಯಾಗಿ ಕೂಗಿದರು.

ಇನ್ನು ಸುಮ್ಮನಿರುವುದು ಸರಿಯಲ್ಲವೆಂದು ಕಲ್ಯಾಣಿ ಆನಂದನನ್ನು ಎತ್ತಿಕೊಂಡು,

"ಬಾರೋ ಹೋಗೋಣ. ಅಮ್ಮ ಕರೀತಿದಾಳೆ" ಎಂದಳು. ಇಳಿದು ಹೋಗುತ್ತಿದ್ದ ಅವಳನ್ನು ತಡೆದು ಆತ ಕೇಳಿದ

"ಮಿಸ್, ಒಂದು ಮಾತು."

ಕಲ್ಯಾಣಿ ಹಿಂತಿರುಗಿ ನೋಡಿದಳು.

"ನೀವೂ ಮದುವೆಗೆ ಬರ್ತೀರಾ? "

"ನಾನಿನ್ನೂ ಯಾವುದೂ ನಿರ್ಧರಿಸಿಲ್ಲ" ಎನ್ನುತ್ತಾ ಕಲ್ಯಾಣಿ ಆನಂದನೊಡನೆ ಮನೆಯೊಳಗೆ ಹೋದಳು.

ಕಲ್ಯಾಣಿ ಒಳಗೆ ಬಂದೊಡನೆ ವಿಜಯಮ್ಮ ಅವಳನ್ನು ತರಾಟೆಗೆ ತೆಗೆದುಕೊಂಡರು.

"ಮನೆ ತುಂಬಾ ನೆಂಟರು ಬಂದಿದಾರೆ. ನೀನು ಇಲ್ಲಿ ಯಾವ ಕೆಲಸಕ್ಕೂ ಬರದೆ ತಲೆ ಮರೆಸಿಕೊಂಡು ಓಡಿಹೋಗು. ತುಂಬಾ ಚೆನ್ನಾಗಿರತ್ತೆ."

"ಇಲ್ಲಮ್ಮ, ಆನಂದ ತುಂಬಾ ರಗಳೆ ಮಾಡ್ತಿದ್ದ. ಅವನಿಗೆ ಬಸ್ಸು ತೋರಿಸೋಕೆ ಕರ್‍ಕೊಂಡು ಹೋಗಿದ್ದೆ".

"ಕಳ್ಳನಿಗೊಂದು ಪಿಳ್ಳೆ ನೆವ. ಹೋಗು. ಬಚ್ಚಲು ಮನೇಲಿ ತಿಂಡಿ ತಿಂದ ತಟ್ಟೆ ಲೋಟಗಳ ರಾಶಿ ಬಿದ್ದಿದೆ. ತೊಳೆದುಕೊಂಡು ಬಾ".

ತಾಯಿಯ ಬೈಗುಳ ಕೇಳಿ ಕಲ್ಯಾಣಿ ಮುಖ ಚಿಕ್ಕದು ಮಾಡಿಕೊಂಡು ಲೋಟಗಳನ್ನು ತೊಳೆಯಲು ಹೋದಳು.

ಬಚ್ಚಲು ಮನೆಯಲ್ಲಿ ವತ್ಸಲೆಯ ಅಣ್ಣ ಸುಬ್ಬರಾಮು ಮುಖ ತೊಳೆಯುತ್ತಾ ನಿಂತಿದ್ದ. ಕಲ್ಯಾಣಿಯನ್ನು ನೋಡಿ ಅವನು

"ನಮಸ್ಕಾರಾಮ್ಮ. ಎಲ್ಲಿ ಆಗಿನಿಂದ ಕಾಣಲಿಲ್ಲ?" ಎಂದ.

"ನಿಮ್ಮ ತಂಗಿ ಮಗನ್ನ ಸಮಾಧಾನ ಮಾಡ್ತಿದ್ದೆ."

"ನೀವೂ ಬರಬೇಕು ಮದುವೆಗೆ" ಸುಬ್ಬರಾಮು ಅವಳನ್ನು ಆಹ್ವಾನಿಸಿದ.

"ಭಾರಿ ಉಡುಗೊರೆ ಕೊಡ್ತೀರಾ?"

"ಭಾರಿ ಉಡುಗೊರೆ ಎಂದು ಹೇಳಲಾರೆ. ನಮ್ಮ ಯೋಗ್ಯತೆಗೆ ತಕ್ಕ ಹಾಗೆ ಕೊಡ್ತೀವಿ."

"ನೀವು ಏನೂ ಕೊಡೋಲ್ಲ ಎಂದರೆ ನಾನು ಬರ್ತೀನಿ."

"ಹಾಗೆ ಹೇಳಲಾರೆ."

"ಹಾಗಾದರೆ ನಾನು ಬರೋದಿಲ್ಲ."

"ತುಂಬಾ ಮೊಂಡರಪ್ಪ ನೀವು."

ವತ್ಸಲೆಯ ಮದುವೆಯಲ್ಲಿ ಲಂಗ ಹಾಕುತ್ತಿದ್ದ ಕಲ್ಯಾಣಿಯಲ್ಲಿ ಅವನಿಗೆ ಸ್ವಲ್ಪ ಸಲಿಗೆಯಿತ್ತು.

"ಆಯ್ತೇನೆ ತಟ್ಟೆಗಳನ್ನ ತೊಳೆದೂ" ವಿಜಯಮ್ಮ ಕೂಗಿದರು.

"ಹೂಂ. ಆಗ್ತಾ ಇದೆ" ಕಲ್ಯಾಣಿ ಕೂಗಿಕೊಂಡು ತಟ್ಟೆಯೊಂದನ್ನು ಕೈಗೆತ್ತಿಕೊಂಡಳು.

"ಈಗ ನಾವು ಹೊರಗೆ ಸುತ್ತಾಡೋಕೆ ಹೋಗ್ತೀವಿ. ನೀವೂ ಬರ್ತೀರಾ?" ಸುಬ್ಬರಾಮು ಟವಲಿನಿಂದ ಮುಖ ಒರೆಸಿಕೊಳ್ಳುತ್ತ ಕೇಳಿದ.

"ನಾನು ಯಾಕೆ?"

"ಮೈಸೂರು ತೋರಿಸೋಕೆ. ಮದನಪಲ್ಲಿಯಿಂದ ನಮ್ಮ ನೆಂಟರು ಕೆಲವರು ಬಂದಿದಾರೆ."

"ಒಂದು ಸಂಜೇಲಿ ಮೈಸೂರನ್ನ ನೋಡಿ ಮುಗಿಸೋಕಾಗೋದಿಲ್ಲ."

"ಎಷ್ಟಾಗತ್ತೋ ಅಷ್ಟು"

"ಅಮ್ಮ ಒಪ್ತಾರೋ ಇಲ್ವೋ" ಕಲ್ಯಾಣಿ ಅನುಮಾನಿಸಿದಳು.

"ನಿಮ್ಮ ಅಮ್ಮನ್ನ ನಾನು ಒಪ್ಪಿಸುತ್ತೀನಿ" ಎಂದು ಅವಳಿಗೆ ಅಭಯ

ವಿತ್ತ ಸುಬ್ಬರಾಮು.

ಕಲ್ಯಾಣಿ ನೆಂಟರೊಡನೆ ಹೊರಗೆ ತಿರುಗಾಡಿಕೊಂಡು ಬರಲು ಹೋಗುವುದು ವಿಜಯಮ್ಮನಿಗೆ ಸ್ವಲ್ಪವೂ ಇಷ್ಟವಿರದಿದ್ದರೂ, ಅಷ್ಟೆಲ್ಲಾ ಸಂಭ್ರಮಗಳ ನಾಯಕನಾದ ಸುಬ್ಬರಾಮು ಸ್ವತಃ ಕಳುಹಿಸಿರೆಂದು ಕೇಳಿ ಕೊಂಡಾಗ ಅವರಿಗೆ ಒಲ್ಲೆನೆನ್ನಲಾಗಲಿಲ್ಲ.

ಮನೆಯ ಕೆಲಸದ ಸಂಪೂರ್ಣ ಜವಾಬ್ದಾರಿ ಅತ್ತೆ–ಸೊಸೆಯ ಮೇಲೆ ಬಿತ್ತು.

ಕಲ್ಯಾಣಿ ಬಲು ಉತ್ಸಾಹದಿಂದ ಅಲಂಕರಿಸಿಕೊಂಡಳು. ಅವಳು ಅಲಂಕರಿಸಿಕೊಳ್ಳುವಾಗ ವತ್ಸಲೆ ಅವಳ ಬಳಿಗೆ ಬಂದು,

“ಆನಂದನ್ನೂ ಕರ್ಕೊಂಡು ಹೋಗು. ಅವನಿದ್ದರೆ ನಮ್ಮ ಕೆಲಸಕ್ಕೆ ತೊಂದರೆ” ಎಂದಳು.

“ನನಗೇನೋ ಹೋಗೋಕೆ ಇಷ್ಟವಿರಲಿಲ್ಲ....” ಎಂದು ಕಲ್ಯಾಣಿ ರಾಗ ತೆಗೆಯುವಷ್ಟರಲ್ಲಿ ವತ್ಸಲೆ.

“ಸಾಕು ನಿನ್ನ ಬಿನ್ನಾಣ” ಎಂದಳು.

ಅಂತೂ ಆನಂದನೊಡನೆ ಕಲ್ಯಾಣಿಯೂ ಬಸ್ಸನ್ನೇರಿದಳು. ಬಸ್ಸಿನಲ್ಲಿ ಸಿಗರೇಟು ಸೇದಲು ಬಂದಿದ್ದ ತರುಣ ತುಂಬಾ ಆತ್ಮೀಯವಾಗಿ ಮಾತನಾಡುತ್ತಾ ಸುಬ್ಬರಾಮುವಿನ ಪಕ್ಕದಲ್ಲಿ ಕುಳಿತಿದ್ದ.

ಮದನಪಲ್ಲಿಯಿಂದ ಬಂದಿದ್ದ ನೆಂಟರಿಗೆ ಕಲ್ಯಾಣಿ ಬಸ್ಸು ಹೋಗುತ್ತಿದ್ದಂತೆ ಊರಿನ ಸ್ಥೂಲ ಪರಿಚಯ ಮಾಡಿಕೊಟ್ಟಳು.

ಸುಬ್ಬರಾಮುವಿನ ಗೆಳೆಯ ರೈಲ್ವೆ ಸ್ಟೇಷನ್ನು ಬರುತ್ತಲೂ ಕಲ್ಯಾಣಿಯ ಕಡೆ ತಿರುಗಿ “ಇದೇನಿದು–ಇಲ್ಲಿ ಗಡಿಯಾರ ಕಾಣುತ್ತಲ್ಲಾ” ಎಂದು ಕೇಳಿದ.

ಸುಬ್ಬರಾಮು “ಸಾಕೋ ರಾಮನಾಥ! ಮೈಸೂರಿನಲ್ಲಿ ಹುಟ್ಟಿ ಬೆಳೆದು ಕೀಟಲೆ ಮಾಡೋಕೆ ಕೇಳ್ತೀಯಾ?” ಎಂದ.

“ಕೇಳಲಿ ಅದಕ್ಕೇನು. ಇದು ರೈಲ್ವೆ ನಿಲ್ದಾಣ. ಒಂದು ಅದ್ಭುತ ಸಂಗತಿಯೆಂದರೆ ನೀವು ಇಲ್ಲಿ ಟಿಕೀಟು ತಗೊಂಡು ಬೆಂಗಳೂರಿನ ರೈಲು ಹತ್ತಿದರೆ ಸೀದಾ ಬೆಂಗಳೂರಿಗೆ ಹೋಗಿಬಿಡಬಹುದು—” ಎಂದು ಸಾವ

ಕಾಶವಾಗಿ ಉತ್ತರವಿತ್ತಳು ಕಲ್ಯಾಣಿ.

"ಬೆಂಗಳೂರಿನ ರೈಲೇ ಹತ್ತಬೇಕೆ ?" ರಾಮನಾಥ ಅಚ್ಚರಿಗೊಂಡವ ನಂತೆ ಕೇಳಿದ.

"ಬೇಡ. ಬೇಕಾದರೆ ನಂಜನಗೂಡಿನ ರೈಲು ಹತ್ತಿ ಅಲ್ಲಿಂದ ಬಸ್ಸಿನಲ್ಲಿ ಊಟಿಗೆ ಹೋಗಿ, ಅಲ್ಲಿಂದ ಕೊಯಮುತ್ತೂರು...." ಎಂದವಳು ಹೇಳುವಷ್ಟರಲ್ಲಿ ಸುಬ್ಬರಾಮು ನಗುತ್ತಾ,

"ನಮ್ಮ ಕಲ್ಯಾಣಿ ಮಾತಿಗೆ ಸೋಲುವವಳಲ್ಲ" ಎಂದ. ರಾಮನಾಥ ಪಿಸುದನಿಯಲ್ಲಿ ಗೆಳೆಯನನ್ನು ಕೇಳಿದ: "ಯಾರೋ ಆ ಹುಡುಗಿ ತುಂಬಾ ಜೋರಾಗಿರುವ ಹಾಗಿದೆ"

"ನನ್ನ ತಂಗಿಯ ನಾದಿನಿ"

"ನೀನು ಪರಿಚಯ ಮಾಡಿಕೊಟ್ಟೆಯಲ್ಲಾ ಅನಂತ–ಅವರ ತಂಗೀನೆ ?"

"ಹೂಂ. ಕಿರಿಯ ತಂಗಿ"

"ತುಂಬಾ ಬಜಾರಿ ಅಂತ ಕಾಣುತ್ತೆ"

"ಅವಳ ವಯಸ್ಸಿನಲ್ಲಿ ಎಲ್ಲ ಹುಡುಗಿಯರೂ ಹಾಗೇ ಇರ್ತಾರೆ. ಸಂಸಾರದ ಗಾಣಕ್ಕೆ ಸಿಕ್ಕಿದ ಮೇಲೆ ಪಳಗಿದ ಪ್ರಾಣಿಗಳಾಗಿ ಬಿಡುತ್ತಾರೆ."

ಸುಬ್ಬರಾಮು ಬಹಳ ಅನುಭವ ಇರುವವನಂತೆ ಮಾತನಾಡಿದ.

"ನಿನ್ನ ಗಾಣಕ್ಕೂ ಒಂದು ಹುಡುಗಿ ಸಿಕ್ಕುವುದರಲ್ಲಿದೆ" ಎಂದು ಪರಿತಾಪ ವ್ಯಕ್ತಪಡಿಸಿದ ರಾಮನಾಥ.

ರಾತ್ರಿ ಎಂಟು ಗಂಟೆಯ ಹೊತ್ತಿಗೆ ಎಲ್ಲರೂ ಮನೆಗೆ ಬಂದರು. ನೆಂಟರೊಡನೆ ಬಂದಿಳಿದ ಕಲ್ಯಾಣಿಯನ್ನು ವಿಜಯಮ್ಮ ಒಂದು ಗಳಿಗೆ ಕೂರಗೊಡಲಿಲ್ಲ. ಮನೆಗೆ ಬಂದವಳೇ ಕಲ್ಯಾಣಿ ಸೆರಗನ್ನು ಸೊಂಟಕ್ಕೆ ಬಿಗಿದು ಬಾಳೆ ಎಲೆ ಹಾಕತೊಡಗಿದಳು.

ವಿಜಯಮ್ಮನೊಡನೆ ಮಾತನಾಡುತ್ತಿದ್ದ ವತ್ಸಲೆಯ ತಾಯಿ ಅವಳು ಎರಡೆಲೆ ಹಾಕಿದ ಕೂಡಲೇ

"ಮಗೂ, ಅಗ್ರ ಎಡಗಡೆಗೆ ಬರಬೇಕಮ್ಮ, ದೊನ್ನೆ ಬಲಗಡೆ ಇಡು" ಎಂದರು.

ವಿಜಯಮ್ಮ ಕೋಪದಿಂದ ಮಗಳನ್ನು ನುಂಗುವಂತೆ ನೋಡಿದರು. ಬೀಗಿತ್ತಿಯೆದುರಿಗೆ ತಮಗೆ ಅವಮಾನವಾಯಿತೆಂದೇ ಆಕೆ ಭಾವಿಸಿದರು.

ವಿಜಯಮ್ಮನ ಮುಖಭಾವ ಗ್ರಹಿಸಿ ವತ್ಸಲೆಯ ತಾಯಿ ಮತ್ತೆ ಹೇಳಿದರು. "ಪಾಪ! ಹುಡುಗಿ ಏನೂ ತಿಳಿಯದು."

ವಿಜಯಮ್ಮ ಮುಳ್ಳಿನ ಮೇಲೆ ಕಾಲಿಟ್ಟವರಂತೆ ಎದ್ದು ಅಡಿಗೆ ಮನೆಯೊಳಗೆ ಧಡಧಡನೆ ಹೋದರು. ಅವರನ್ನು ಹಿಂಬಾಲಿಸಿ ಕಲ್ಯಾಣಿ ಪಿಸುದನಿಯಲ್ಲಿ,

"ಅಮ್ಮ, ನೀನು ನಡೆದು ಬಂದ ರಭಸಕ್ಕೆ ಭೂಮಿ ನಡುಗಿ ಬಾಳೆ ಎಲೆಗಳು ಸೊಟ್ಟಗಾದವು" ಎಂದಳು.

"ಅವರೆದುರಿಗೆ ನನ್ನ ಮಾನ ಕಳೆದೆ."

"ನಿನ್ನ ಮಾನ ಎಲ್ಲಿ ಹೋಯ್ತಮ್ಮ. ಏನಾದರೂ ಅವಮಾನ ಆಗಿದ್ದರೆ ನನಗಾಗಬೇಕು. ಈಗೇನು ಎಲೆಗೆ ನೀರು ಚಿಮುಕಿಸಲೋ ಅಥವಾ ಹೀಗೇ ಸ್ವಲ್ಪ ಹೊತ್ತು ಜಗಳ ಕಾಯೋಣವೋ?"

"ನೀನು ಏನೂ ಮಾಡಬೇಡ ಮಹಾತಾಯಿ. ಗಂಭೀರವಾಗಿ ಹೋಗಿ ಊಟಕ್ಕೆ ಕೂತುಕೋ. ಇನ್ನು ಉಪ್ಪು, ಕೋಸಂಬರಿ ಎಲ್ಲಾ ಪೆದ್ದುಪೆದ್ದಾಗಿ ಬಡಿಸಿ ಮತ್ತೆ ಅವಮಾನ ಮಾಡಬೇಡ."

"ಇಷ್ಟು ಹೇಳಿದರೆ ನಾನು ಧನ್ಯ" ಎಂದವಳೇ ಕಲ್ಯಾಣಿ ಹಾಲಿನೊಳಗೇ ಬಂದಳು.

ಆದರೂ ಅವಳಿಗೆ ಒಳಗೊಳಗೇ ನಿರಾಶೆಯಾಗಿತ್ತು.

ಎಲೆ ಹಾಕಿ, ಮಾಡಿದ ಅಡಿಗೇನ ಬಡಿಸೋದು ತನಗೆ ಬರೋದಿಲ್ಲವೇ?

ಮಾರನೆಯ ದಿನ ಬೆಳಗ್ಗೆ ತಿಂಡಿ, ಕಾಫಿ ಮುಗಿಸಿಕೊಂಡು ಎಲ್ಲರೂ ಬಸ್ಸು ಹತ್ತಿದರು. ಕಲ್ಯಾಣಿ ಹೊರಡುವವರೆವಿಗೂ ಅನುಮಾನಿಸುತ್ತಲೇ ಇದ್ದಳು. ವತ್ಸಲಾ, ಅನಂತ ಇಬ್ಬರೂ ಸೇರಿ ಅವಳನ್ನು ಹೊರಡಿಸಿದರು.

ಬಸ್ಸು ಉಡುಪಿಯನ್ನು ತಲುಪಿದಾಗ ಸಂಜೆ ನಾಲ್ಕು ಗಂಟೆಯ ಸಮಯವಾಗಿತ್ತು. ಬಸ್ಸಿನಲ್ಲಿ ಮದುವೆ ಮನೆಯ ಜನದ ಮಾತು ಕತೆಗೆ ಸ್ವಲ್ಪವೂ ತಡೆಯಿರಲಿಲ್ಲ. ಆದರೆ ಉಡುಪಿಯನ್ನು ಸಮೀಪಿಸುತ್ತಿದ್ದಂತೆ

ಪ್ರಯಾಣದ ಆಯಾಸದಿಂದಾಗಿ ಎಲ್ಲರ ಮಾತೂ ಕೊಂಚ ಕಡಿಮೆಯಾಗಿತ್ತು.

ಆ ಗುಂಪಿನಲ್ಲಿ ಸುಬ್ಬರಾಮುವಿನ ಒಬ್ಬ ದಡ್ಡ ಗೆಳೆಯನಿದ್ದ. ಆತನಿಗೆ ಯಾವ ಬಗೆಯ ಕುಹಕವಾಗಲಿ, ವ್ಯಂಗ್ಯವಾಗಲಿ ತಿಳಿಯುತ್ತಿರಲಿಲ್ಲ. ಬಸ್ಸಿನಲ್ಲಿದ್ದ ಮುಕ್ಕಾಲು ಪಾಲು ಜನ ಅವನನ್ನು ಕೀಟಲೆ ಮಾಡಿ ಸಮಯ ಕಳೆಯುತ್ತಿದ್ದರು.

ರಸ್ತೆಯ ಅಕ್ಕ ಪಕ್ಕಗಳಲ್ಲಿದ್ದ ಪೊದೆಯ ಎಲೆಗಳ ಮೇಲಿದ್ದ ಧೂಳಿನ ತೆರೆಯನ್ನು ನೋಡಿ ಬಸ್ಸಿನಲ್ಲಿದ್ದವರೊಬ್ಬರು;

"ಯಾರು ಈ ಪೊದೆಗಳಿಗೆಲ್ಲಾ ಧೂಳು ಎರಚಿರೋರು ?" ಎಂದು ಆ ಗೆಳೆಯನನ್ನು ಕೇಳಿದರು.

ಆತ ಅಚ್ಚರಿಯಿಂದ "ಹೌದಲ್ಲ ಯಾರಿರಬಹುದು ?" ಎಂದರು.

ಆತನ ಪೆದ್ದುತನ ನೋಡಿ ಒಮ್ಮೆ ಕನಿಕರ ಮೂಡಿದರೆ ಮತ್ತೊಮ್ಮೆ ನಗು ಬರುತ್ತಿತ್ತು.

ಉಡುಪಿಯ ಛತ್ರವೊಂದರಲ್ಲಿ ಗಂಡಿನ ಕಡೆಯವರನ್ನು ಇಳಿಸಿದ್ದರು. ಊರು ತಲುಪಿದೊಡನೆ ಕಾಫಿ, ತಿಂಡಿಯಾಯಿತು.

ಇನ್ನು ರಾತ್ರಿ ಎಂಟು ಗಂಟೆಯವರೆವಿಗೆ ಏನು ಮಾಡಬೇಕು ಎಂಬ ಸಮಸ್ಯೆ ಹುಟ್ಟಿತು.

ರಾಮನಾಥ ಸೂಚಿಸಿದ: "ಹೇಗಿದ್ದರೂ ಬಸ್ಸಿದೆ. ಮಲ್ಪೆಗೆ ಹೋಗಿ ಸೂರ್ಯಾಸ್ತಮಯ ನೋಡಿಕೊಂಡು ಬರೋಣ."

ಸುಬ್ಬರಾಮು ಅವನ ಅಭಿಪ್ರಾಯವನ್ನು ಅನುಮೋದಿಸಿದ. ಆದರೆ ಹಿರಿಯರು ಪ್ರಯಾಣದ ಆಯಾಸದಿಂದ ಬಳಲಿದ್ದರು. ಆದುದರಿಂದ ಅವರು

"ನಾವು ಬರೋದಿಲ್ಲ. ನೀವು ಹೋಗಿ ಬನ್ನಿ" ಎಂದರು.

"ಸಮುದ್ರಸ್ನಾನ ಮಾಡಬೇಕು" ಎಂದು ಉತ್ಸಾಹ ತೋರಿಸಿದಳು ವತ್ಸಲಾ.

"ಇವತ್ತು ಬೇಡ, ಇನ್ನೊಂದು ದಿನ ಬೆಳಗ್ಗೆ ಹೋಗಿ ಸ್ನಾನ ಮಾಡಿಕೊಂಡು ಬರೋಣ" ಎಂದ ಅನಂತ.

ಸಮುದ್ರತೀರಕ್ಕೆ ಹೊರಡುವ ಸಿದ್ಧತೆ ನಡೆಯಿತು. ಕಲ್ಯಾಣಿಯ ಶೃಂಗಾರ ಕಂಡು ಅನಂತ ಎಚ್ಚರಿಸಿದ.

"ಪ್ರಿಯ ತಂಗಿ, ಉಡುಪಿ ಒಂದು ಹಳ್ಳಿ, ಆದುದರಿಂದ ಆದಷ್ಟು ಕಡಿಮೆ ಮೇಕಪ್ ಮಾಡಿಕೋ. ಆಮೇಲೆ ಇಲ್ಲಿಯ ಜನ ನಾವು ಸಿನಿಮಾದವರು ಎಂದು ತಿಳಿದುಕೊಂಡರೆ ಕಷ್ಟ"

ಕಲ್ಯಾಣಿ ಧಾರಾಳವಾಗಿ ಪೌಡರನ್ನು ಹಚ್ಚಿಕೊಂಡು "ಹಾಗೇನು?" ಎಂದು ಮಾತ್ರ ಕೇಳಿದಳು.

"ಮಾಡಿಕೊಳ್ಳಲಿ ಹುಡುಗಿ"—ವತ್ಸಲ ನಾದಿನಿಯ ಪರ ವಹಿಸಿ ಮಾತನಾಡಿದಳು.

ಕಲ್ಯಾಣಿ ಅನಂತನ ಕಡೆ ತಿರುಗಿ "ಅಣ್ಣಾ, ಸಮುದ್ರಸ್ನಾನ ಮಾಡಿದರೆ ತಲೆ ಕೂದಲು ಉದುರಿ ಹೋಗತ್ತಂತೆ. ಹೌದೆ?" ಎಂದು ಪ್ರಶ್ನಿಸಿದಳು.

"ತಲೇಲಿ ತುಂಬಾ ಕೂದಲಿರೋರಿಗೆ ಆ ಭಯ. ಕೂದಲೇ ಇಲ್ಲದವರಿಗೆ ಆ ಭಯವೇ ಇಲ್ಲ!" ಎಂದುಬಿಟ್ಟ ರಾಮನಾಥ.

ಅವನು ತನ್ನ ಮೋಟು ಜಡೆಯನ್ನು ಟೀಕಿಸುತ್ತಿದ್ದಾನೆಂದು ಕಲ್ಯಾಣಿಗೆ ಕೂಡಲೇ ತಿಳಿಯಿತು. ಅವಳು ಸಿಟ್ಟಿಗೆದ್ದು,

"ನಾನು ಬರೋದಿಲ್ಲ" ಎಂದು ಹಠ ಹಿಡಿದಳು.

ವತ್ಸಲ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದಳು. ಆದರೆ ಕಲ್ಯಾಣಿಯ ಸಿಟ್ಟು ಶಾಂತವಾಗಲಿಲ್ಲ. ಸುಬ್ಬರಾಮು ಗೆಳೆಯನಿಗೆ,

"ಹೂಂ. ಹೋಗಿ ಕ್ಷಮೆ ಕೇಳಿಕೋ. ಹಾಗೂ ಇನ್ನು ಮೇಲೆ ಹುಡುಗಿಯರ ಹತ್ತಿರ ಒರಟೊರಟಾಗಿ ಮಾತನಾಡಬೇಡ" ಎಂದ.

ರಾಮನಾಥನಿಗೆ ಧರ್ಮಸಂಕಟಕ್ಕಿಟ್ಟುಕೊಂಡಿತು.

ಕಲ್ಯಾಣಿ ಒಂದು ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಕುಳಿತುಬಿಟ್ಟಿದ್ದಳು.

ರಾಮನಾಥ ವಿಧಿಯಿಲ್ಲದೆ ಹೋಗಿ ಬಾಗಿಲು ತಟ್ಟಿದ.

"ಯಾರು?" ಕಲ್ಯಾಣಿ ಕೇಳಿದಳು.

ಅವಳು ಮೇಲೆ ಕೋಪ ಪ್ರದರ್ಶಿಸಿದ್ದರೂ ಒಳಗೊಳಗೆ ಅಂಜಿಕೆ

ಯಾಗಿತು—ನಿಜವಾಗಿಯೂ ಎಲ್ಲಿ ಅವರೆಲ್ಲಾ ತನ್ನನ್ನು ಬಿಟ್ಟು ಸಮುದ್ರ ತೀರಕ್ಕೆ ಹೊರಟುಹೋಗುವರೋ ಎಂದು. ಸಮುದ್ರ ನೋಡುವ ಸಲುವಾಗಿಯೇ ಅವಳು ಉಡುಪಿಗೆ ಬಂದಿದ್ದಳು. ಯಾರಾದರೂ ಬಂದು ಮತ್ತೊಮ್ಮೆ ಕರೆದರೆ ತಾನು ಸಮಾಧಾನಗೊಂಡು ಹೊರಟುಬಿಡಬೇಕು ಎಂದವಳು ನಿಶ್ಚಯಿಸಿದ್ದಳು.

"ನಾನು ಅಪರಾಧಿ" ಎಂದ ರಾಮನಾಥ. ಕಲ್ಯಾಣಿ ಬಾಗಿಲು ತೆಗೆದು ಹಿಂದೆ ಸರಿದಳು. ರಾಮನಾಥ ಒಳಗೆ ಬಂದು ಅತಿ ವಿನಯ ಪ್ರಕಟಿಸುತ್ತಾ,

"ನನ್ನ ಕ್ಷಮಿಸಿ, ದಯವಿಟ್ಟು ಬನ್ನಿ" ಎಂದ.

"ಲೇಡೀಸ್ ಹತ್ತಿರ ಹೇಗೆ ಮಾತನಾಡಬೇಕೂಂತ ನಿಮಗೆ ಗೊತ್ತಿಲ್ಲವೇ?" ಕಲ್ಯಾಣಿ ಬಿರುಸಿನಿಂದ ಕೇಳಿದಳು.

"ಲೇಡೀಸ್ ಹತ್ತಿರ ಮಾತನಾಡುವುದು ಮಾತ್ರ ನನಗೆ ಗೊತ್ತು."

"ಅಂದರೆ ನಾನು ಲೇಡಿ ಅಲ್ಲಾಂತ ನಿಮ್ಮ ಭಾವನೆಯೇ?"

"ಛೆ! ನಾನು ಹಾಗಂದರೂ ಜನ ಒಪ್ಪಬೇಕಲ್ಲ? ನೀವೂ........ಬರ್ತೀರಿ ತಾನೇ?"

"ಬರೋದಿಲ್ಲ."

"ಇಷ್ಟೊಂದು ಮೇಕಪ್ ಮಾಡಿಕೊಂಡಿದೀರಿ, ಎಲ್ಲಾ ಅನ್ಯಾಯವಾಗಿ ಬಿಡುತ್ತದೆ. ನಾನು ತಮಾಷೆಗಂದರೆ ಸಿಟ್ಟುಮಾಡಿಕೋತೀರಲ್ಲಾ?"

ಸಧ್ಯ! ಅವನು ಅಷ್ಟು ಹೇಳಿದ್ದೇ ಸಾಕೆಂದು ಕಲ್ಯಾಣಿ ರಾಜಿಯಾದಳು.

ಮಠ್ಠೆಯ ಸಮೀಪದ ರಸ್ತೆಯ ಎರಡು ಪಕ್ಕಗಳ ತೆಂಗಿನ ಮರಗಳು ಸಮುದ್ರದಿಂದ ಬೀಸಿ ಬರುವ ಹಿತವಾದ ತಂಗಾಳಿಗೆ ಮೈಯೊಡ್ಡಿ ನರ್ತಿಸುತ್ತಿದ್ದವು.

ಅಲ್ಲಿಂದ ಮುಂದೆ ಬೆಸ್ತರ ಗುಡಿಸಲುಗಳು ಸುಮಾರು ಅರ್ಧ ಫರ್ಲಾಂಗು; ಮರಳಿನ ರಾಶಿಯ ಮೇಲೆ ನಡೆದು ಸಮುದ್ರದ ಅಲೆಗಳಿಗೆ ಕಾಲನ್ನೊಡ್ಡಿ ಎಲ್ಲರೂ ನಿಂತುಕೊಂಡರು.

ಇನ್ನೂ ಕೊಂಚ ಬಿಗಿಯ ಮೇಲಿದ್ದ ಕಲ್ಯಾಣಿ ಇದುವರೆವಿಗೂ ಒಂದು ಮಾತನಾಡಿರಲಿಲ್ಲ. ಅವಳನ್ನು ಪ್ರಸನ್ನಗೊಳಿಸಬೇಕೆಂದು ರಾಮ

ನಾಥ ವಿಶ್ವಸಾಹಸ ಮಾಡುತ್ತಿದ್ದ.

ಕಲ್ಯಾಣಿ ಆನಂದನಿಗಾಗಿ ಕಪ್ಪೆಚಿಪ್ಪು, ಶಂಖಗಳನ್ನು ಆರಿಸತೊಡ ಗಿದಳು. ರಾಮನಾಥ ಕಲ್ಯಾಣಿಗಾಗಿ ತಾನೂ ಅವುಗಳನ್ನು ಹೆಕ್ಕತೊಡ ಗಿದ. ಆ ಸಂದರ್ಭದಲ್ಲಿ ಅವರಿಬ್ಬರ ನಡುವೆ ಶಾಂತಿ, ಸಮಾಧಾನ ಮತ್ತೆ ನೆಲೆಸಿದವು.

ಮಲ್ಪೆಯಿಂದ ಉಡುಪಿಗೆ ಹಿಂತಿರುಗಿ ಹೋಗುವಾಗ ಬಸ್ಸಿನಲ್ಲಿ ಕಲ್ಯಾ ಣಿಯ ಮಾತೇ ಮಾತು. ಅವಳ ಕೈಲಿದ್ದ ಚೀಲದಲ್ಲಿ ಕಪ್ಪೆಚಿಪ್ಪು ಶಂಖ ಗಳು ಝಲ್ ಎಂದ ಸದ್ದು ಮಾಡುತ್ತಿದ್ದವು. ಅದು ಒಂದು ಅಮೂಲ್ಯ ನಿಧಿಯೋ ಎಂಬಂತೆ ಕಲ್ಯಾಣಿ ಆ ಚೀಲವನ್ನು ತನ್ನ ಕೈಯಲ್ಲಿಯೇ ಇಟ್ಟುಕೊಂಡಿದ್ದಳು.

ಆ ದಿನ ರಾತ್ರಿ ಕಲ್ಯಾಣಿ ಒಂದು ದೊಡ್ಡ ಗಂಡಾಂತರದಿಂದ ಪಾರಾ ದಳು.

ಅವರನ್ನಿಳಿಸಿದ್ದ ಛತ್ರದಲ್ಲಿ ಸ್ವಲ್ಪ ಜಿರಲೆಗಳ ಕಾಟವಿತ್ತು. ಕಲ್ಯಾ ಣಿಗೆ ಜಿರಲೆಗಳೆಂದರೆ ಹಾವು, ಹುಲಿಗಿಂತಲೂ ಹೆಚ್ಚು ಭಯವಿತ್ತು.

ರಾತ್ರಿ ಅವಳು ಮಲಗಿಕೊಳ್ಳಲು ಹಾಸಿಗೆ ಸುರುಳಿಯನ್ನು ಬಿಚ್ಚಿದ ಕೂಡಲೇ ರೂಮಿನ ಮೂಲೆಯೊಂದರಿಂದ ಜಿರಲೆಯೊಂದು ತನ್ನ ಮೀಸೆ ಯನ್ನು ಅಲುಗಾಡಿಸುತ್ತಾ ನೆಟ್ಟಗೆ ಅವಳ ಹಾಸಿಗೆಯ ಮೇಲೆ ಹರಿದು ಬಂತು. ಕಲ್ಯಾಣಿ 'ಅಯ್ಯೋ' ಎಂದು ಕೂಗುತ್ತಾ ಹೊರಗೋಡಿ ಬಂದಳು.

"ಅದು ಏನೂ ಮಾಡೋಲ್ಲ ಬಾರೆ" ಎಂದು ವತ್ಸಲಾ ಕೂಗುತ್ತಿದ್ದರೂ ಕಲ್ಯಾಣಿ ಅವಳ ಮಾತನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ. ಯಾಕೆಂದರೆ ಜಿರಲೆಯಂತಹ ಭಯಂಕರ ಪ್ರಾಣಿಯನ್ನು ಅಬಲೆಯಾದ ಹೆಣ್ಣು ಏನು ತಾನೆ ಮಾಡಿಯಾಳು ಎಂಬುದೇ ಅವಳ ಸಿದ್ಧಾಂತವಾಗಿತ್ತು. ಅಂತಹ ಕ್ರೂರ, ಜುಗುಪ್ಸೆಯನ್ನುಂಟುಮಾಡುವ ಪ್ರಾಣಿಯನ್ನು ಸದೆಬಡಿಯಲು ಗಂಡಸರೇ ಸರಿ ಎಂದವಳ ಅಭಿಪ್ರಾಯ.

ಇಸ್ಪೀಟಾಡುತ್ತಿದ್ದ ಸುಬ್ಬರಾಮು, ರಾಮನಾಥ, ಅನಂತ ಕಲ್ಯಾ ಣಿಯ ಕೂಗು ಕೇಳಿ ಆಟ ನಿಲ್ಲಿಸಿ ಪ್ರಶ್ನಾರ್ಥಕವಾಗಿ ಅವಳ ಕಡೆ ನೋಡಿ ದರು.

ಕಲ್ಯಾಣಿ ಗದಗುಟ್ಟಿ ನಡುಗುತ್ತಿದ್ದಳು.

"ಏನೇ ?" ಅನಂತ ಕೇಳಿದ.

"ಹೀಗೇ....ಮೂಲೆಯಿಂದ....ನಿಧಾನವಾಗಿ ಹರಿದುಕೊಂಡು ಬಂತು ನೆಟ್ಟಗೆ ನನ್ನ ಹಾಸಿಗೆ ಮೇಲೆ....ಅಷ್ಟೊಂದು ದೊಡ್ಡದನ್ನ ನಾನು.... ನೋಡೇ ಇರಲಿಲ್ಲ....ಹರಿದುಕೊಂಡು...."

ರಾಮನಾಥ, ಸುಬ್ಬರಾಮು ಕೈಲಿದ್ದ ಎಲೆಗಳನ್ನು ತಟ್ಟನೆ ಬಿಸಾಡಿ ಗಾಬರಿಯಾಗಿ ಎದ್ದು ನಿಂತರು.

ಸುಬ್ಬರಾಮು ತನ್ನ ತಂದೆಯ ಕೋಲನ್ನು ತೆಗೆದುಕೊಂಡ. ರಾಮನಾಥ ಒಂದು ತುಂಡು ಸೌದೆಯನ್ನೇ ಎತ್ತಿಕೊಂಡು ಬಂದ.

"ಎಲ್ಲಿ ತೋರಿಸು ಬಾ" ಅನಂತ ಕೇಳಿದ.

"ಅಯ್ಯೋ ನಾನು ಬರೋದಿಲ್ಲಪ್ಪ. ನಂಗೆ ಭಯ"

ಅವರಿಬ್ಬರೂ ರೂಮಿನೊಳಗೆ ಹೋದರು. ಕಲ್ಯಾಣಿ ರೂಮಿನ ಬಾಗಿಲಿನಲ್ಲಿ ನಿಂತು 'ಅಲ್ಲಿ' ಎಂದಳು.

ವತ್ಸಲಾ ನಿರಾತಂಕವಾಗಿ ಆನಂದನನ್ನು ಮಲಗಿಸಿಕೊಂಡು ಮಲಗಿದ್ದಳು. ಅದನ್ನು ನೋಡಿ ಅವರಿಬ್ಬರಿಗೂ ಆಶ್ಚರ್ಯವಾಯಿತು.

"ಏಳಿ ಮೇಲೆ; ಮಗೂನ ಮೊದಲು ಎಬ್ಬಿಸಿ" ರಾಮನಾಥ ಆತಂಕದಿಂದ ನುಡಿದ.

"ಹಾವು ಬಂದಿದೆ ವತ್ಸೂ. ಬೇಗ ಏಳು."

ವತ್ಸಲಾ ನಗತೊಡಗಿದಳು. ಅವಳಿಗೆ ಮಾತನಾಡಲು ಸಹ ಆಗಲಿಲ್ಲ.

"ಹಾವು !....ನಾಗರಹಾವು...."

ಸುಬ್ಬರಾಮು ಹುಬ್ಬುಗಂಟಿಕ್ಕಿದ. ರಾಮನಾಥನಿಗೆ ಯಾವುದೂ ಅರ್ಥವಾಗಲಿಲ್ಲ.

"ಅಗೋ ನೋಡಿ ಕಲ್ಯಾಣಿಯ ಹಾವು" ಎನ್ನುತ್ತಾ ವತ್ಸಲಾ ಹಾಸಿಗೆಯ ಮೇಲಿದ್ದ ಜಿರಲೆಯ ಕಡೆ ಕೈತೋರಿಸಿದಳು.

ರಾಮನಾಥ ನಗುತ್ತಾ ಹಾಸಿಗೆಯ ಮೇಲೆ ಕುಸಿದುಬಿದ್ದ. ಅನಂತನಿಗೆ ಆ ಕೋಲಿನಿಂದಲೇ ಕಲ್ಯಾಣಿಗೆ ಎರಡು ಬಾರಿಸಬೇಕೆನಿಸಿತು— ಎಲ್ಲರನ್ನೂ ವೃಥಾ ಹೆದರಿಸಿದಳೆಂದು.

"ಅಯ್ಯೋ ನಾನು ಏನೋಂತಿದ್ದೆ. ಜಿರಲೆ!"

ಸುಬ್ಬರಾಮುವಿನ ಸಲೀಸು ಕಂಡು ಕಲ್ಯಾಣಿಗೆ ರೇಗಿತು. ತನಗೆಂತಹ ಅಪಾಯ ಕವಿದುಬಂದಿತ್ತೆನ್ನುವುದೂ ಇವರಿಗೆ ಲಕ್ಷ್ಯವಿಲ್ಲವಲ್ಲಾ!

"ನಿಮಗೆ ತಮಾಷಿ. ನನಗೆ ಪ್ರಾಣಸಂಕಟ" ಎಂದಳು ಕಲ್ಯಾಣಿ ಕಳವಳದಿಂದ.

"ಅದೇನೂ ಮಾಡೋಲ್ಲ. ಮಲಕ್ಕೊಳ್ಳಿ" ಎಂದ ಸುಬ್ಬರಾಮು.

"ಈ ರೂಮಿನಲ್ಲಿ ಜಿರಲೆ ಇಲ್ಲಾಂತ ಖಾತ್ರಿ ಮಾಡಿಕೊಂಡೇ ನಾನು ಮಲಗೋದು" ಕಲ್ಯಾಣಿ ದೃಢವಾಗಿ ಹೇಳಿದಳು.

ರಾಮನಾಥ ರೂಮಿನಲ್ಲಿದ್ದ ಪ್ರತಿಯೊಂದು ಜಿರಲೆಯನ್ನೂ ಹಿಡಿದು ಹೊರಕ್ಕೆ ಸಾಗಿಸಿದ ಮೇಲೆ ಕಲ್ಯಾಣಿ ಅಳುಕುತ್ತಾ ಒಳಗೆ ಬಂದಳು.

ಬೆಳಗ್ಗೆ ಕಲ್ಯಾಣಿ ಎದ್ದುಬಂದ ಕೂಡಲೆ ಅನಂತ ವ್ಯಂಗ್ಯವಾಗಿ ಕೇಳಿದ.

"ಓ! ಬದುಕಿದೀಯಾನ್ನು! ಅಂತೂ ಒಂದು ಅಪಮೃತ್ಯು ತಪ್ಪಿದ ಹಾಗಾಯಿತು."

ರಾಮನಾಥ ಕೇಳಿದ "ನಿದ್ದೆ ಬಂತಾ?"

ಕಲ್ಯಾಣಿ ಇಬ್ಬರಿಗೂ ಉತ್ತರ ಕೊಡದೆ ಒಳಗೆ ಹೋದಳು.

ಸುಬ್ಬರಾಮುವಿನ ಮದುವೆ ಸರಳವಾಗಿ ನಡೆಯಿತು. ಮದುವೆಯಾದ ನಂತರ ರಾಮನಾಥನಿಗೆ ಸುಬ್ಬರಾಮುವಿನ ಸಾನ್ನಿಧ್ಯವಿರುತ್ತಿರಲಿಲ್ಲ. ಸುಬ್ಬರಾಮು ಹೊಸ ಹೆಂಡತಿಯ ಪರಿಚಯದಲ್ಲಿ ಹೆಚ್ಚು ಆಸಕ್ತನಾದ.

ಹೀಗಾಗಿ ಧಾರೆಯಾದ ನಂತರ ರಾಮನಾಥ ಒಂಟಿಯಾದ. ಯಾವಾಗಲೂ ಅನಂದನನ್ನು ಆಟವಾಡಿಸುತ್ತಾ ಚಪ್ಪರದ ಹೊರಗೇ ಕಾಲ ಕಳೆಯುತ್ತಿದ್ದ ಕಲ್ಯಾಣಿಯನ್ನೇ ಅನುಸರಿಸಲು ರಾಮನಾಥ ಪ್ರಯತ್ನಿಸಿದ.

"ಏನು? ರಾಯರು ಒಂಟಿಯಾದರು. ಪಾಪ! ಸ್ನೇಹಿತನ ಜೊತೆ ತಪ್ಪಿಹೋಯಿತು" ಎಂದು ಕಲ್ಯಾಣಿ ಸುಳ್ಳು ಪರಿತಾಪ ವ್ಯಕ್ತಪಡಿಸಿದಳು.

"ಒಬ್ಬರು ತಪ್ಪಿದರೇನು? ಇನ್ನೊಬ್ಬರು ಸಿಕ್ಕಿದರು" ಎಂದ ರಾಮನಾಥ.

"ನೀವು ಹೋಗಿ ಅಡ್ಡ ಹಾಕಿದರೆ ಸಿಕ್ಕದೆ ಏನು ?"

ಎರಡು ದಿನ ಮದುವೆಯ ಸಂಭ್ರಮ ಕಳೆದ ಮೇಲೆ ಒಂದು ಬೆಳಿಗ್ಗೆ ಸಮುದ್ರ ತೀರಕ್ಕೆ ಹೋಗಿ ಸ್ನಾನಮಾಡಿ ಬರಲು ಸುಬ್ಬರಾಮು ಸೂಚಿಸಿದ. ಎಲ್ಲರೂ ಒಪ್ಪಿಕೊಂಡರು. ಬೆಳಿಗ್ಗೆ ಏಳೂವರೆಗೆ ಎಲ್ಲರೂ ಬಸ್ಸಿನಲ್ಲಿ ಸಮುದ್ರತೀರಕ್ಕೆ ಹೊರಟರು. ಕಲ್ಯಾಣಿ ತಾನು ಸಮುದ್ರಸ್ನಾನ ಮಾಡುವುದಿಲ್ಲವೆಂದೇ ನಿರ್ಧರಿಸಿದ್ದಳು. ಕಾ ರ ಣ ವಿ ಷ್ಟೆ—ಸಮುದ್ರತೀರದಲ್ಲಿ, ಬಟ್ಟಬಯಲಿನಲ್ಲಿ ಬಟ್ಟೆ ಬದಲಾಯಿಸುವುದಾದರೂ ಹೇಗೆ? ಇಪ್ಪತ್ತೆಂಟು ಬಟ್ಟೆಗಳನ್ನು ತೆಗೆದುಹಾಕುವುದೆಂದರೆ ಸಾಮಾನ್ಯವೇ?—ಅದರಲ್ಲೂ ಒದ್ದೆಯಾಗಿ ಮೈಗಂಟಿಕೊಂಡಿರುವ ಬಟ್ಟೆಯನ್ನು ತೆಗೆಯುವುದೂ ಒಂದೇ, ಚರ್ಮವನ್ನು ಸುಲಿದಿಡುವುದೂ ಒಂದೇ.

ಕಲ್ಯಾಣಿಗೆ ಸೀರೆ ಹೇಗೋ ಉಟ್ಟರಾಯಿತು ಎಂಬುದಿರಲಿಲ್ಲ. ಉಟ್ಟ ಸೀರೆ ಸೊಗಸಾಗಿ ಬಳಸಿಕೊಂಡು ಬಂದಿರಬೇಕು, ತೊಟ್ಟ ರವಿಕೆಯಲ್ಲಿ ಸುಕ್ಕಿರಕೂಡದು. ಬಾಚಿದ ತಲೆಗೂದಲಿನಲ್ಲಿ ಎಲ್ಲೆಲ್ಲಿ ತಲೆಗೂದಲು ಹಾರಾಡಬೇಕೋ ಅಲ್ಲಲ್ಲೇ ಹಾರಾಡಬೇಕು, ಮುಡಿದ ಹೂವು ಒಂದು ಪಾರ್ಶ್ವದಿಂದ ಕಾಣಿಸುತ್ತಿರಬೇಕು.....ಇತ್ಯಾದಿ.

ಈ ಸ್ವಯಂಪೂಜೆ ಸಮುದ್ರತೀರದಲ್ಲಿ ಸಾಧ್ಯವೆ? ಆದರೆ ಸಮುದ್ರತೀರದಲ್ಲಿ ಉಳಿದವರೆಲ್ಲಾ ಉರುಳುರುಳಿ ಬರುವ ಅಲೆಗಳಿಗೆ ಮೈಯೊಡ್ಡಿ ಕೇಕೆ ಹಾಕಿ ನಗುವುದನ್ನು ಕಂಡು ಅವಳಿಗೂ ಸ್ನಾನಮಾಡುವ ಆಸೆಯಾಯಿತು. ಒಂದನ್ನೊಂದು ಬೆನ್ನಟ್ಟಿ, ಬಿಳಿನೊರೆ ಕಾರುತ್ತಾ ಬರುವ ಅಲೆ ಅವಳನ್ನು ಸೆಳೆಯಿತು.

"ಅತ್ತಿಗೆ, ನಂಗೂ ಈಗ ಸ್ನಾನ ಮಾಡಬೇಕೆನಿಸುತ್ತಿದೆ. ಏನು ಮಾಡಲಿ? " ಎಂದು ಕಲ್ಯಾಣಿ ವತ್ಸಲೆಯನ್ನು ಕೇಳಿದಳು.

"ಮಹರಾಯ್ತಿಯಾಗಿ ಮಾಡು."

"ನಾನು ಬೇರೆ ಬಟ್ಟೆ ತಂದಿಲ್ಲ."

"ಐದು ನಿಮಿಷದಲ್ಲಿ ಗಾಳಿಗೆ ನಿನ್ನ ವಾಯಿಲ್ ಸೀರೆ ಒಣಗುತ್ತದೆ"

ಅತ್ತಿಗೆಯ ಮಾತಿನಿಂದ ಉತ್ತೇಜಿತಳಾಗಿ ಕಲ್ಯಾಣಿ ನಾಲ್ಕಾರು ಹೆಜ್ಜೆ ಮುಂದೆ ಬಂದಳು. ಅಷ್ಟರಲ್ಲಿ ರಾಮನಾಥ ಅವಳನ್ನು ಹೆದರಿಸಿದ.

"ಹುಷಾರ್. ಸಮುದ್ರದಲ್ಲಿ ಜಿರಲೆಗಳಿರುತ್ತವೆ"

ಕಲ್ಯಾಣಿ ಕುಪಿತಳಾಗಿ ಅವನ ಕಡೆ ತಿರುಗಿ "ಈ ವಿಷಯಾನ ನಿಮಗೆ ಎಂಜಿನೀರಿಂಗ್ ಕಾಲೇಜಿನಲ್ಲಿ ಹೇಳಿಕೊಟ್ಟರೋ?" ಎಂದಳು.

"ಸಮುದ್ರದಲ್ಲಿರುವ ಜಿರಲೆಗಳಿಗೆ ಮೀನು ಅಂತಾರೆ ಜನ. ಆ ಮೀನಿನಿಂದ ಇಲ್ಲಿಯ ಜನ ಬೇರೆ ಯಾವ ತರಕಾರಿ ಸಿಕ್ಕದಿದ್ದರೂ ಇನ್ನೂ ಬದುಕಿದಾರೆ."

"ವಾದಿರಾಜಗುಳ್ಳ ಇದೆಯಲ್ಲಾ" ಎಂದಳು ವತ್ಸಲಾ.

"ಮೀನಿದ್ದರೆ ಇರಲಿ. ನಾನು ಹೆದರೋಲ್ಲ" ಎಂದಳು ಕಲ್ಯಾಣಿ.

"ಜಿರಲೆಗಿಂತಲೂ ಮೀನು ಇನ್ನೂ ಅಪಾಯ ಕಲ್ಯಾಣಿ ದೇವಿಯವರೇ. ನಿಮ್ಮ ರೂಮಿನಲ್ಲಿದ್ದ ಜಿರಲೆಗಳನ್ನು ಈ ಬಡಪಾಯಿ ಹೊಡೆದೋಡಿಸಿದ. ಆದರೆ ತಾವು ಈ ಸಮುದ್ರದೊಳಗೆ ತಮ್ಮ ಚರಣಕಮಲಗಳನ್ನಿರಿಸುವ ಮುನ್ನ ರಾಮನಾಥ ಇಲ್ಲಿಯ ಮೀನುಗಳನ್ನೆಲ್ಲಾ ಓಡಿಸಲಾರ. ಕ್ಷಮಿಸಿ" ಎಂದ.

"ಜಿರಲೆ ತರಹ ಮೀನು ಅಸಹ್ಯವಾಗಿರೋಲ್ಲ."

"ಅಸಹ್ಯ! ತಮಗೆ ಅದರ ವಾಸನೆಯ ಪರಿಚಯವಿಲ್ಲವೇನೋ?"

"ಬಿಡ್ರಿ. ಮೀನಿನಿಂದ ಪ್ರಾಣಾಪಾಯವಿಲ್ಲ" ಎನ್ನುತ್ತಾ ಕಲ್ಯಾಣಿ ಮುಂದುವರಿದಳು.

"ಹೌದು. ಜಿರಲೆಯಿಂದಲೇ ಪ್ರಾಣಾಪಾಯ" ಎಂದ ರಾಮನಾಥ.

ಅಲೆಯೊಂದು ಉರುಳಿ ಬಂದು ಅವಳನ್ನು ಮುಸುಕಿದಾಗ ಕಲ್ಯಾಣಿ ಪುಲಕಿತಗೊಂಡಳು.

"ಆಹ್! ಎಷ್ಟೊಂದು ಚೆಂದ!"

"ಯಾವುದು ಮೀನೇ?" ಎಂದ ರಾಮನಾಥ.

ಸುಬ್ಬರಾಮುವಿನ ಮೈದುನನೆ ಎಲ್ಲರನ್ನೂ ಎಚ್ಚರಿಸಿ ಸಮುದ್ರದಿಂದ ಹೊರಗೆ ಎಳೆದು ತರಬೇಕಾಯಿತು.

"ಬನ್ನಿ ಮನೇಲಿ ಎಲ್ಲರೂ ಊಟಕ್ಕೆ ಕಾದಿರುತ್ತಾರೆ" ಎಂದವನು ನಾಲ್ಕಾರು ಬಾರಿ ಹೇಳಿದ ಮೇಲೆ ಎಲ್ಲರೂ ಒಲ್ಲದ ಮನಸ್ಸಿನಿಂದ ಸ್ನಾನ ಮುಗಿಸಿದರು.

ಸುಬ್ಬರಾಮು ತಂಗಿಗೆ ಒಂದು ಅಮೂಲ್ಯವಾದ ಸಲಹೆಯನ್ನಿತ್ತ.

"ವತ್ಸಲಾ, ನಿನ್ನ ಸೀರೇನ ಒಗೆಯದೆ ಹಾಗೇ ಇಟ್ಟುಕೊಂಡಿರು. ಸಾರು, ಹುಳಿಮಾಡಿದ ದಿನ ಈ ಸೀರೇನ ಒಂದು ಸಲ ಆ ಸಾರಿನ ಪಾತ್ರೆಯಲ್ಲಿ ಅದ್ದಿ ತೆಗೆದಿರಿಸು—ನಿನ್ನ ಗಂಡನಿಗೆ ಉಪ್ಪಿನ ದುಡ್ಡು ಒಂದೆರಡು ತಿಂಗಳಾದರೂ ಉಳಿಯುತ್ತದೆ."

"ಉಳಿತಾಯದ ಯೋಜನೆಯಲ್ಲಿ ಈ ಸಲಹೆಯನ್ನು ಸೇರಿಸಬೇಕು" ಎಂದ ಅನಂತ.

ಮಾರನೆಯ ದಿನ ಬೆಳಿಗ್ಗೆ ಎಲ್ಲರೂ ಮೈಸೂರಿಗೆ ಹೊರಟರು. ರಾತ್ರಿಯನ್ನು ಮೈಸೂರಿನಲ್ಲಿ ಕಳೆದು ವತ್ಸಲೆಯ ತವರು ಮನೆಯವರು ಬೆಳಿಗ್ಗೆ ಬೆಂಗಳೂರಿಗೆ ಹೊರಟರು.

ಹೊರಡುವುದಕ್ಕೆ ಮುಂಚೆ ರಾಮನಾಥ ಕಲ್ಯಾಣಿಗೆ ಹೇಳಿದ "ನೋಡಿ, ನಾನು ಸಮಯ ಕಳೆಯುವುದಕ್ಕೆ ತಮಾಷಿಯಾಗಿ ಮಾತನಾಡಿರಬಹುದು. ಆದರೆ ನೀವು ತಪ್ಪು ತಿಳಿಯಬೇಡಿ. ನಿಮ್ಮ ಮನಸ್ಸಿಗೆ ನನ್ನ ಮಾತಿನಿಂದ ನೋವಾಗಿದ್ದರೆ ದಯವಿಟ್ಟು ಕ್ಷಮಿಸಿ."

"ಹೋಗಲಿ. ಕ್ಷಮಿಸಿದೀನಿ" ಎಂದಳು ಕಲ್ಯಾಣಿ—ಅವನಿಗೆ ಜೀವದಾನಮಾಡುವ ರಾಣಿಯ ಠೀವಿಯಲ್ಲಿ.

"ಬೆಂಗಳೂರಿಗೇನಾದರೂ ಬಂದರೆ ಬನ್ನಿ ನಮ್ಮ ಮನೆಗೆ."

"ಸಧ್ಯಕ್ಕೆ ಬೆಂಗಳೂರಿಗೆ ಬರುವ ಯೋಚನೆಯಿಲ್ಲ."

ನಂಟರೆಲ್ಲಾ ಹೊರಟು ಹೋದ ಮೇಲೆ ವತ್ಸಲೆಗೆ ಮನೆ ಬರಿದಾದಂತೆ ತೋರಿತು. ಕಲ್ಯಾಣಿಯನ್ನಾದರೂ ಕೂಗಿ ಎರಡಾಟ ಪಗಡೆ ಆಡಿ ಬೇಜಾರು ಪರಿಹಾರ ಮಾಡಿಕೊಳ್ಳಲು ಅವಳು

'ಕಲ್ಯಾಣೀ' ಎಂದಳು.

ಆದರೆ ಅವಳಾಗಲೇ ಕೈಲಿ ನಿಟ್ಟಿಂಗ್ ಕಡ್ಡಿ ಹಿಡಿದು ಗೆಳತಿಯ ಮನೆಯಲ್ಲಿ ಕುಳಿತಿದ್ದಳು.

ನಾಲಿಗೆ 'ಬೇಜಾರು' ಎಂದು ನುಡಿಯುತ್ತಿದ್ದರೂ ತಲೆಗೂದಲನ್ನು ಎತ್ತಿ ಹಿಂದಕ್ಕೆ ಬಾಚುವುದರಲ್ಲಿ ಸ್ವಲ್ಪವೂ ವ್ಯತ್ಯಾಸವಾಗಬಾರದು. 'ಥೂ ಸಾಕಾಯಿತಪ್ಪ' ಎಂದು ಅವಳು ಮಾತನಾಡುತ್ತಲೇ ಸೀರೆಗೆ ಹೊಂದಿಕೆ

ಯಾಗುವ ರವಿಕೆ ಯಾವುದು ಎಂದು ಹುಡುಕುತ್ತಿದ್ದಳು.

ಜೊತೆಗೆ ಇದ್ದುದನ್ನು ಇದ್ದಂತೆ ಯಾರೇನು ತಿಳಿದುಕೊಳ್ಳುವರೆಂದು ಲಕ್ಷ್ಯಮಾಡದೇ, ಇತರರ ಮನಸ್ಸಿಗೆ ನೋವನ್ನುಂಟುಮಾಡುವ ವಿಷಯವಾಗಿದ್ದರೂ ಸರಿ—ತಟ್ಟನೆ ಆಡಿಬಿಡುತ್ತಿದ್ದಳು. ಈ ಬಗೆಯ ಬಿಚ್ಚು ಮನಸ್ಸು, ಸ್ಪಷ್ಟ ಮಾತು, ನಿರ್ಭೀತಿಯಿಂದ ಕೂಡಿದ ವರ್ತನೆಯಿಂದಾಗಿ ಅವಳಿಗೆ ಹೆಚ್ಚು ಗೆಳತಿಯರಿರಲಿಲ್ಲ. ಅವಳದು ವಿಚಿತ್ರ ಸ್ವಭಾವ.

ತಿಂಡಿಯ ಹೊತ್ತಿಗೆ ಸರಿಯಾಗಿ ಅವಳಿಗೆ ಪಾಠ ಹೇಳಿಕೊಡಲು ಮನೆಯ ಮೇಷ್ಟರೊಬ್ಬರು ಬರುತ್ತಿದ್ದರು. ಕಲ್ಯಾಣಿಗೆ ಮೊದಲೇ ಪಾಠ ಹೇಳಿಸಿಕೊಳ್ಳುವುದೆಂದರೆ ತಲೆನೋವು. ಅದರಲ್ಲೂ ಅವರು ಹೇಳಿಕೊಡುತ್ತಿದ್ದುದು ಚರಿತ್ರೆ, ಭೂಗೋಳದಂತಹ ಮಹಾ ಕಠಿಣವಾದ ವಿಷಯಗಳು. ಅವರು ತಿಂಡಿಯ ಹೊತ್ತಿಗೆ ಬರುತ್ತಿದ್ದು ಅವಳು ತಿಂಡಿ ತಿನ್ನುವಿಕೆಗೂ ತಡೆಯನ್ನುಂಟುಮಾಡುತ್ತಿದ್ದರು. ಆದುದರಿಂದ ಕಲ್ಯಾಣಿ ಅವರು ಬಂದರೆಂದರೆ ಅವರಿಗೂ ಕಾಫಿ, ತಿಂಡಿಕೊಟ್ಟು ತಾನು ತಿನ್ನಲು ಒಳಗೆ ಹೋಗಿಬಿಡುತ್ತಿದ್ದಳು. ನಾಲ್ಕೈದು ದಿನ ಒಟ್ಟಿಗೆ ತಿಂಡಿ ತಿಂದ ಆ ಮೇಷ್ಟರಿಗೆ ಐದನೆಯ ದಿನವೂ ತಿಂಡಿ ತಿನ್ನಲು ಕೊಂಚ ಸಂಕೋಚವಾಯಿತು. ಅವರು ಕಲ್ಯಾಣಿಗೆ

"ನನಗೇಕಮ್ಮ ತಿಂಡಿ?" ಎಂದರು.

"ತಿನ್ನೋಕೆ."

"ದಿವಸಾ ಕೊಡ್ತೀರಲ್ಲಾ...." ಎಂದವರು ಹೇಳುವಷ್ಟರಲ್ಲಿ ಕಲ್ಯಾಣಿ ತಟ್ಟನೆ

"ನಾವೇನು ಮಾಡ್ತೋಣ? ನಮ್ಮ ಮನೆಯ ತಿಂಡಿ ಹೊತ್ತಿಗೆ ಸರಿಯಾಗಿ ನೀವು ಬರ್ತೀರಿ" ಎಂದುಬಿಟ್ಟಳು.

ಅವಳ ದುಡುಕು ಮಾತಿನಿಂದಾಗಿ ಕಲ್ಯಾಣಿಗೆ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಮೊದಲ ಟರ್ಮಿನ ಪರೀಕ್ಷೆಯಲ್ಲಿ ತುಂಬಾ ಕಡಿಮೆ ನಂಬರ್ ಬಂದಿತ್ತು.

ಬಹುಶಃ ರಾಮನಾಥ ಅವಳ ಈ ಕಲ್ಯಾಣಗುಣಗಳಿಗೆ ಮೆಚ್ಚಿಕೊಂಡಿದ್ದನೋ ಏನೋ?

ಅವನು ಸಮಯ ಸಿಕ್ಕಿದಾಗಲೆಲ್ಲಾ ಅವಳನ್ನು ಮಾತನಾಡಿಸುವುದು, ಕಣ್ಣುಗಳಿಂದ ಹಿಂಬಾಲಿಸುವುದು, ಇವುಗಳನ್ನು ನೋಡಿ ಅನಂತನಿಗೆ ಕಲ್ಯಾಣಿಯನ್ನು ಅವನಿಗೇ ಯಾಕೆ ಕೊಟ್ಟು ಮದುವೆ ಮಾಡಬಾರದು ಎನಿಸಿತು.

ಅವನು ತನ್ನ ಆಲೋಚನೆಯನ್ನು ತಾಯಿ ತಂದೆಯ ಮುಂದಿಟ್ಟ. ಕಲ್ಯಾಣಿ ಮನೆಯಲ್ಲಿಲ್ಲವೆಂದು ಖಾತ್ರಿಮಾಡಿಕೊಂಡೇ ಅವನು ತನ್ನ ಮನಸ್ಸಿನ ಅಭಿಪ್ರಾಯವನ್ನು ಅವರ ಮುಂದೆ ಹೇಳಿದ.

ವೆಂಕಟಾಚಲಯ್ಯನವರು ಎಂದಿನಂತೆ ಹೆಂಡತಿಯ ಕಡೆ ಕೈ ತೋರಿಸಿ "ನೀವುಂಟು—ಅವಳುಂಟು" ಎಂದರು.

ಹರಿದ ಸೀರೆಯೊಂದನ್ನು ರಿಪೇರಿ ಮಾಡುತ್ತಿದ್ದ ವಿಜಯಮ್ಮ

"ಅದ್ಯಾಕೊ, ಅವಳಿಗೂ ನಿಮಗೂ ಏನೂ ಸಂಬಂಧವಿಲ್ಲದ ಹಾಗೆ ಮಾತನಾಡ್ತೀರ?" ಎಂದರು.

"ಛೇ, ನಾನು ಹಾಗೆಂದನೇ? ಸಂಪಾದನೆ ಮಾಡೋದು ನನ್ನ ಕರ್ತವ್ಯ. ಉಳಿದಿದಿದ್ದೆಲ್ಲಾ ನಿಂದು" ಎಂದರಾತ.

"ಜವಾಬ್ದಾರಿಯಿಂದ ತಪ್ಪಿಸಿಕೊಳ್ಳೋದಕ್ಕೆ ಈ ಆಟ."

"ಶ್....ಜೋರಾಗಿ ಮಾತನಾಡಬೇಡಮ್ಮ, ಪಕ್ಕದ ಮನೆಯವರು ಇಲ್ಲೇ ಕಿಟಕಿಯ ಹತ್ತಿರ ಸುಳಿದಾಡಿದ ಹಾಗಾಯಿತು."

"ನನಗೇನು ಹೆದರಿಕೆ? ಇರೋ ವಿಷಯ ಹೇಳಿದೆ."

"ಅದಿರಲಿ. ಕಲ್ಯಾಣಿ ಮದುವೆಯ ವಿಷಯ ಏನು ಹೇಳ್ತೀಯಾ?" ಎಂದು ಮಗ ತಾನು ಪ್ರಸ್ತಾಪಿಸಿದ್ದ ವಿಷಯವನ್ನು ಮತ್ತೆ ತಾಯಿಯ ಗಮನಕ್ಕೆ ತಂದ.

"ವಿಜಯಮ್ಮ ನಿಟ್ಟುಸಿರಿನೊಡನೆ ಹೇಳಿದರು "ಅವಳಿಗ್ಯಾಕೋ ಮದುವೆ?"

ಅನಂತ ಆಚ್ಚರಿಯಿಂದ "ಹಾಗಂದರೇನಮ್ಮಾ, ಕಲ್ಯಾಣಿಗೆ ಮದುವೆಯ ವಯಸ್ಸಾಗಲಿಲ್ಲವೇ? ಹದಿನೆಂಟಾಯ್ತೇನೋ?" ಎಂದ.

"ಹದಿನೆಂಟಾದರೇನು? ಇವಳನ್ನ ಕಟ್ಟಿಕೊಂಡವನು ಅದು ಹೇಗೆ ಬಾಳ್ತಾನೋ ಕಾಣೆ. ಒಂದು ಕೆಲಸ ಬರೋಲ್ಲ, ಒಂದು ವ್ಯವಹಾರ

ತಿಳಿಯೋಲ್ಲ...." ಎನ್ನುತ್ತಾ ವಿಜಯಮ್ಮ ತಮ್ಮ ಟೀಗಿತ್ತಿಯ ಎದುರಿಗೆ ಕಲ್ಯಾಣಿ ಬಲಕ್ಕೆ ಅಗ್ರ ಬರುವಂತೆ ಬಾಳೆಲೆ ಹಾಕಿ ತಮ್ಮನ್ನು ಮಹಾ ದುಃಖಕ್ಕೀಡು ಮಾಡಿದ ಸಂಗತಿಯನ್ನು ಅನಂತನ ಹೃದಯ ಕರಗುವಂತೆ ವರ್ಣಿಸಿ,

"ಒಂದು ಎಲೆ ಹಾಕೋಕೆ ಬರೋಲ್ಲ. ಇವಳಿಗ್ಯಾಕೋ ಮದುವೆ?" ಎಂದು ಮಾತು ಮುಗಿಸಿದರು.

ಅನಂತ ತಮ್ಮ ವ್ಯಥೆಯಲ್ಲಿ ಭಾಗಿಯಾಗುತ್ತಾನೆಂದು ವಿಜಯಮ್ಮ ಭಾವಿಸಿದ್ದರು. ಆದರೆ ಆಕೆಯ ವರ್ಣನೆ ಕೇಳಿ ಅನಂತನ ಹೃದಯ ಕರಗಲಿಲ್ಲ. ಬದಲು ಆತ ದೊಡ್ಡದಾಗಿ ನಕ್ಕು

"ಅದಕ್ಕೇನು, ಎಲೆ ಉಪಯೋಗಿಸದೆ ತಟ್ಟೆ ಉಪಯೋಗಿಸಿದರೆ ಈ ಸಮಸ್ಯೆಯೇ ಏಳೋದಿಲ್ಲ" ಎಂದ.

"ಎಲ್ಲಾ ಹುಡುಗಾಟ" ಎಂದರು ತಾಯಿ.

"ರಾಮನಾಥನ ಬಗ್ಗೆ ನಿನ್ನ ಅಭಿಪ್ರಾಯ ಏನು?"

"ಅವನೇನು ಯಾತರಲ್ಲೂ ತೆಗೆದುಹಾಕುವ ಹಾಗಿಲ್ಲ."

ಅನಂತನ ದೃಷ್ಟಿಯಲ್ಲಿ ರಾಮನಾಥ ಸರ್ವ ವಿಧದಲ್ಲಿಯೂ ಒಳ್ಳೆಯ ವರ ಎನಿಸಿಕೊಂಡಿದ್ದ. ಸಾಲದುದಕ್ಕೆ ಮದುವೆಯ ಮನೆಯಲ್ಲಿ ರಾಮನಾಥನ ಕಣ್ಣುಗಳು ಯಾವಾಗಲೂ ತಂಗಿಯನ್ನು ಹಿಂಬಾಲಿಸುತ್ತಿದ್ದವು.

ಮದುವೆಯ ಚಪ್ಪರದಲ್ಲಿ ಅನೇಕ ಹುಡುಗಿಯರು ಅವಳಂತೆಯೇ ಅಲಂಕರಿಸಿಕೊಂಡು ಸಂಭ್ರಮಪಡುತ್ತಾ ಓಡಾಡುತ್ತಿದ್ದರೂ ರಾಮನಾಥನ ಕಣ್ಣುಗಳನ್ನು ಸೆಳೆದಿದ್ದವಳು ಕಲ್ಯಾಣಿ. ಅವಳಿಗಿಂತ ಅನೇಕ ಚೆಲುವೆಯರಿದ್ದರೂ ಅವನಿಗೆ ಮತ್ತೆಮತ್ತೆ ನೋಡಬೇಕೆನಿಸಿದ್ದು ಕಲ್ಯಾಣಿಯನ್ನು ಮಾತ್ರ.

ಒಂದು ಗುಂಪಿನಲ್ಲಿ ಎದ್ದು ಕಾಣುವಂತಹ ಸೌಂದರ್ಯವಲ್ಲ ಕಲ್ಯಾಣಿಯದು.

ಅತಿ ಸಾಮಾನ್ಯವಾದ ರೂಪು-ಒಮ್ಮೆ ಕಂಡು ಕೂಡಲೇ ಮರೆತು ಬಿಡಬಹುದಾದ ಮುಖ—ಆದರೂ ಆ ಮುಖವೇ ಅದೇಕೋ ಅವನನ್ನು ಸೆಳೆದಿತ್ತು.

ರಾಮನಾಥನ ನಿದ್ರಿತ ಮನಸ್ಸನ್ನು ಮೆಲ್ಲನೆ ತಟ್ಟಿ ಎಚ್ಚರಿಸಿದ್ದು–ಕಲ್ಯಾಣಿ ಬದುಕಿನಲ್ಲಿರಿಸಿದ್ದ ಆಸಕ್ತಿ, ಉತ್ಸಾಹ. ಒಣಗಿದ ಮರ ಸಹ ಅವಳ ಮುಖಭಾವ ನೋಡಿದರೆ ಚಿಗುರಬೇಕು–ಅಷ್ಟೊಂದು ಜೀವ ಕಳೆ ಅವಳ ಮುಖದಲ್ಲಿ ತುಂಬಿ ತುಳುಕುತ್ತಿತ್ತು.

ಅಂತಹವನೂ ಕಲ್ಯಾಣಿಯನ್ನು ಮೆಚ್ಚಿಕೊಳ್ಳಬೇಕಾದರೆ? ತಾಯಿಯ ಮನಸ್ಸು ಒಳಗೊಳಗೆ ಮಗಳ ಬಗ್ಗೆ ಹೆಮ್ಮೆ ತಾಳಿತು. “ನೋಡೋಣ” ಎಂದರು ಆಕೆ.

ಮನೆಯಲ್ಲಿ ಕಲ್ಯಾಣಿಯ ಮದುವೆಯ ಬಗ್ಗೆ ಒಂದೆರಡು ದಿನ ಬಿಸಿಯಾದ ಚರ್ಚೆ ನಡೆದು ಕೊನೆಗೆ ಯಾವುದೂ ನಿರ್ಧಾರವಾಗದೆ ಎಲ್ಲವೂ ಹಾಗೆಯೇ ತಣ್ಣಗಾಯಿತು.

ರಾಮನಾಥನೂ ಕ್ರಮೇಣ ಅವರ ಮನಸ್ಸಿನಿಂದ ಮರೆಯಾಗುವುದರಲ್ಲಿದ್ದ. ಆದರೆ ಅವನ ನೆನಪು ಪೂರ್ಣವಾಗಿ ಮಾಸುವಷ್ಟರಲ್ಲಿ ಅನಂತ, ಕಲ್ಯಾಣಿಗೆ ಮತ್ತೊಮ್ಮೆ ಅವನ ಭೇಟಿಯಾಯಿತು.

ಅವರ ಭೇಟಿಯಾದದ್ದು ದಸರಾ ವಸ್ತುಪ್ರದರ್ಶನದಲ್ಲಿ.

ಒಂದು ದಿನ ಸಂಜೆ ಅನಂತ, ವತ್ಸಲಾ, ಕಲ್ಯಾಣಿ ಮೂವರೂ ವಸ್ತುಪ್ರದರ್ಶನಕ್ಕೆ ಹೊರಟರು.

ಅಲ್ಲಿ ಅವರು ಸ್ಟಾಲುಗಳನ್ನು ನೋಡುತ್ತಾ ಬಂದಂತೆ ಹಿಂದೂಸ್ಥಾನ್ ವಿಮಾನ ಕಾರ್ಖಾನೆಯವರು ಇರಿಸಿದ್ದ ಶಾಖೆಯನ್ನು ನೋಡಲು ಅನಂತನ ಪರಿವಾರ ಒಳಗೆ ಹೋಯಿತು.

ರಾಮನಾಥ ಮದುವಣಿಗನಂತೆ ಸಿಂಗಾರ ಮಾಡಿಕೊಂಡು ಬಂದವರಿಗೆಲ್ಲ ವಿಮಾನ ತಯಾರಿಸುವ ಬಗ್ಗೆ, ಅದರ ವಿವಿಧ ಯಂತ್ರಗಳು, ಅವುಗಳು ಕೆಲಸ ಮಾಡುವ ರೀತಿ ಮುಂತಾದವುಗಳನ್ನು ವರ್ಣಿಸುತ್ತಿದ್ದ.

ಅನಂತನನ್ನು ನೋಡಿದೊಡನೆ ರಾಮನಾಥ ದೊಡ್ಡದಾಗಿ ನಗುತ್ತಾ ಮುಂದೆ ಬಂದು ಅನಂತನ ಕೈಯನ್ನು ಬಿಗಿಯಾಗಿ ಹಿಡಿದು ಕುಲುಕಿದ. ವತ್ಸಲ, ಕಲ್ಯಾಣಿಯರಿಗೆ ಕೈ ಮುಗಿದ.

ಅವನು ನಗುವಾಗ ಮುಖ ತುಂಬಾ ಚಿಕ್ಕ ಹುಡುಗನ ಮುಖದಂತೆ ಕಾಣುತ್ತಿತ್ತು.

"ಬಹಳ ಅಪರೂಪ ದರ್ಶನ" ಎಂದ ಅನಂತ.

"ಚಾಕರಿಯ ಮೇಲೆ ಬಂದದ್ದು...."

"ಕಾರ್ಖಾನೆಯಿಂದ ಕಳಿಸಿದಾರೇನು ?"

"ಹೂಂ. ನಾನು, ನನ್ನ ಜೊತೆಗೆ ಇನ್ನಿಬ್ಬರು ಎಂಜಿನೀಯರುಗಳು ಬಂದಿದೀವಿ. ಯಾರಾದರೂ ಒಬ್ಬರು ಇಲ್ಲಿರಲೇಬೇಕು. ಅವರಿಬ್ಬರೂ ಕಾಫಿ ತಗೊಳ್ಳೋಕೆ ಹೋದರು. ಅವರು ಬಂದಮೇಲೆ ಚಾರ್ಜನ್ನು ಅವರಿ ಗೊಪ್ಪಿಸಿ ನಾವು ಹೋಗಿ ಬರೋಣ" ಎಂದ ರಾಮನಾಥ.

ಅವರನ್ನು ಆಕಸ್ಮಾತ್ತಾಗಿ ಭೇಟಿ ಮಾಡಿದ್ದು ರಾಮನಾಥನಿಗೆ ನಿಜ ವಾಗಿಯೂ ತುಂಬಾ ಸಂತೋಷವನ್ನುಂಟು ಮಾಡಿತ್ತು.

"ನಾವು ಯಾಕೆ? ನಾನೂಂತ ಹೇಳಿ"–ಅನಂತ ಅವನ ಮಾತನ್ನು ತಿದ್ದಿದ.

"ಈ ದಿನ ಕಾಫಿ ಬಾರ್‌ನಲ್ಲಿ ನೀವು ನನ್ನ ಅತಿಥಿಗಳು...."

"ಒಂದು ಷರತ್ತಿನ ಮೇಲೆ" ಎಂದ ಅನಂತ.

"ಯಾವುದು ?"

"ನಾಳೆಯಿಂದ, ನೀವು ಮೈಸೂರು ಬಿಟ್ಟು ಹೋಗುವವರೆಗೆ ಆಗ್ಗಾಗೆ ನಮ್ಮ ಅತಿಥಿಗಳಾಗಬೇಕು. ಹಾಗೂ ಇಲ್ಲಿಗೆ ಬಂದೂ ನಮ್ಮನ್ನು ನೋಡ ದಿದ್ದಕ್ಕಾಗಿ ಸಕಾರಣ ವಿವರಣೆ ಕೊಡಬೇಕು".

ರಾಮನಾಥ ಮತ್ತೆ ನಕ್ಕ.

ಅವನು ನಗುವಾಗ ಕಲ್ಯಾಣಿಗೆ ಅವನನ್ನೇ ನೋಡಬೇಕೆನಿಸಿತು.

'ಬಾಯಿತುಂಬಾ, ಮನಸ್ಸಿನ ತುಂಬಾ ನಗುತ್ತಾರೆ–ಪುಟ್ಟ ಮಗುವಿನ ಹಾಗೆ' ಎಂದುಕೊಂಡಳು ಕಲ್ಯಾಣಿ.

ಇದುವರೆವಿಗೂ ಸುಮ್ಮನೆ ನಿಂತಿದ್ದ ಕಲ್ಯಾಣಿ ಈಗ ಮಾತನಾಡಿದಳು.

"ಈ ಯಂತ್ರಗಳನ್ನು ಸ್ವಲ್ಪ ವಿವರಿಸುತ್ತೀರಾ ?"

ಅಷ್ಟರಲ್ಲಿ ಕಾಫಿಗೆ ಹೋಗಿದ್ದ ರಾಮನಾಥನ ಗೆಳೆಯರಿಬ್ಬರೂ ಬಂದರು. ರಾಮನಾಥ ತನ್ನ ಮಾತನ್ನು ನಿಲ್ಲಿಸಿ ಅನಂತನಿಗೆ ಅವರ ಪರಿಚಯ ಮಾಡಿಕೊಟ್ಟು,

"ನಾನು ಸ್ವಲ್ಪ ಪೆಟ್ರೋಲ್ ಹಾಕಿಕೊಂಡು ಬರುತ್ತೀನಿ" ಎಂದ.

ಎಲ್ಲರೂ ಕಾಫಿ ಬಾರಿನ ಕಡೆ ಹೊರಟರು. ನಡುವೆ ರಾಮನಾಥ ಹೇಳಿದ.

"ನೀವೆಲ್ಲಾ ಒಂದಲ್ಲ ಒಂದು ದಿನ ಸಿಕ್ತೀರಿ ಎಂದು ನನಗೆ ಗೊತ್ತಿತ್ತು"

"ಕನಸಿನಲ್ಲಿ ಕಂಡಿದ್ದಿರಾ ಹಾಗೆ?" ಕಲ್ಯಾಣಿ ಕೇಳಿದಳು.

"ನೀವು—ಅದರಲ್ಲೂ ನೀವು ವಸ್ತುಪ್ರದರ್ಶನಕ್ಕೆ ಬಾರದಿರುತ್ತೀರಾ? ಬಳೆ, ರಿಬ್ಬನ್ನು, ಹುರಿಗಾಳು ಇವೆಲ್ಲಾ ಖರ್ಚಾಗುವುದು ಹೇಗೆ? ಅಂಗಡಿಯವರು ನಿಮ್ಮನ್ನು ನೆಚ್ಚಿಕೊಂಡೇ ಬಂದಿರುತ್ತಾರೆ...."

"ನೀವು ಯಾರನ್ನ ನೆಚ್ಚಿಕೊಂಡು ಬಂದಿರಿ?"

"ಯಾರಾದರೂ ವಿಜ್ಞಾನದಲ್ಲಿ ಕುತೂಹಲ ಇರುವ ಜಾಣರು ಸಿಕ್ಕಬಹುದೇನೋ ಎಂದು ಕಾರ್ಖಾನೆಯವರು ನಮ್ಮನ್ನು ಕಳಿಸಿದರು."

ಕಲ್ಯಾಣಿ ಯಂತ್ರವೊಂದರ ಕಡೆ ಕೈ ತೋರಿಸಿದಳು.

"ಇದನ್ನು ಸ್ವಲ್ಪ ವಿವರಿಸುತ್ತೀರಾ?"

"ಯಂತ್ರಗಳಲ್ಲಿ ನಿಮಗೂ ಆಸಕ್ತಿ ಇದೆಯೇನು?" ರಾಮನಾಥ ಅಚ್ಚರಿಯಿಂದ ಕೇಳಿದ.

"ಮತ್ತೆ ನನಗೆ ಕುತೂಹಲ ಇರೋದಿಲ್ಲವೇ?"

"ಸರಿ ಹಾಗಾದರೆ ವಿವರಿಸುತ್ತೀನಿ ಬನ್ನಿ" ಎನ್ನುತ್ತ ರಾಮನಾಥ ಕಲ್ಯಾಣಿಯನ್ನು ಒಂದು ಯಂತ್ರದ ಮುಂದೆ ನಿಲ್ಲಿಸಿ,

"ಇದು ಒಂದು ಟಾಯ್‌ಲೆಟ್ ಸೆಟ್ಟಿನ ಹಾಗೆ. ಈ ಬಗೆಯದನ್ನ ಅಲಂಕಾರ ಪ್ರೇಮಿಗಳು ತೆಗೆದಿರಿಸಿಕೊಂಡರೆ ಬಹಳ ಅನುಕೂಲ. ಏರ್ ಹೋಸ್ಟೆಸ್‌ಗಳು ಇಂತಹದನ್ನ ಸದಾ ಸಮೀಪದಲ್ಲಿಟ್ಟುಕೊಂಡಿರುತ್ತಾರೆ. ಇದಿದ್ದರೆ ಕೈಯಿಂದ ನಾಲ್ಕುಗಂಟೆ ಮುಖಕ್ಕೆ ಮೇಕಪ್ ಮಾಡಿಕೊಳ್ಳುವ ಬದಲು ಐದು ನಿಮಿಷದಲ್ಲಿ—ಅಂದರೆ ಐದು ಗಂಟೆಗೆ ಎಕ್ಸಿಬಿಷನ್‌ಗೆ ಹೋಗುವುದಿದ್ದರೂ ಐದು ಗಂಟೆಗೆ ಐದು ನಿಮಿಷವಿದೆ ಎನ್ನುವಾಗ ಈ ಯಂತ್ರಕ್ಕೆ ಮುಖವೊಡ್ಡಿದರೆ—ಎಂತಹ ಅದ್ಭುತ ಬದಲಾವಣೆ ಅಂತೀರಿ..."

ವತ್ಸಲೆ ಸೆರಗಿನಿಂದ ಬಾಯಿ ಮುಚ್ಚಿಕೊಂಡು ನಕ್ಕಳು. ಕಲ್ಯಾಣಿಗೆ ಹೃದಯ ಸಿಟ್ಟಿನಿಂದ ಬಿರಿದುಹೋಗುತ್ತಿರುವಂತೆ ಭಾಸವಾಯಿತು.

ತನ್ನ ಮೇಕಪ್ ಕುರಿತೇ ಈ ಟೀಕೆ?

ಆದರೂ ಅವಳು ಯಾವುದೂ ತಿಳಿಯದವಳಂತೆ ನಟಿಸುತ್ತಾ, ಆಶ್ಚರ್ಯ ವ್ಯಕ್ತಪಡಿಸುತ್ತಾ 'ಆಮೇಲೆ' ಎಂದಳು.

"ಇದರ ಮುಂದೆ ಬ್ಯೂಟಿ ಸೆಲೂನ್ ಯಾಕೆ...." ರಾಮನಾಥ ಮುಂದು ವರಿಸಿದ.

"ನಿಮ್ಮನ್ನು ಕಾರ್ಖಾನೆಯವರು ಕಳಿಸಬಾರದಾಗಿತ್ತು. ಸ್ನೋ, ಪೌಡರ್ ಕಂಪನಿಯೊಂದರ ಏಜೆಂಟು ನೀವಾಗಿದ್ದರೆ ಸೊಗಸಾದ ವ್ಯಾಪಾರ ವಾಗುತ್ತಿತ್ತು. ನಿಮ್ಮ ವರ್ಣನೆ ಕೇಳಿ ನನಗೆ ಆ ಯಂತ್ರವನ್ನು ಕೊಂಡು ಬಿಡುವ ಮನಸ್ಸಾಗಿತ್ತು. ಆದರ ಬೆಲೆ ಎಷ್ಟು ?"

"ಜಾಸ್ತಿ ಏನಿಲ್ಲ. ಒಂದೈವತ್ತು, ಅರವತ್ತು ಸಾವಿರ ಆಗಬಹುದು."

ರಾಮನಾಥ ಅವರೊಡನೆಯೇ ಸ್ವಲ್ಪ ಹೊತ್ತು ಸುತ್ತಾಡಿದ. ಅವರು ಮನೆಗೆ ಹೊರಡುವುದಕ್ಕೆ ಮುನ್ನ ಒಂದು ಪೌಂಡು ಪೆಪ್ಪರಮೆಂಟ್ ಕೊಂಡು ಕಲ್ಯಾಣಿಯ ಕೈಗೆ ಕೊಟ್ಟು

"ನಿಮಗಲ್ಲ. ಆನಂದನಿಗೆ" ಎಂದ.

"ಹಾಗಾದರೆ ಇದು ಆನಂದನ ಅಮ್ಮನ ಹತ್ತಿರ ಇರುವುದೇ ಕ್ಷೇಮ" ಎನ್ನುತ್ತಾ ಕಲ್ಯಾಣಿ ಪೊಟ್ಟಣವನ್ನು ವತ್ಸಲೆಯ ಕೈಗೆ ಕೊಟ್ಟಳು.

"ನಮ್ಮ ಮನೇಗೆ ಯಾವಾಗ ಬರ್ತೀರಿ?" ಅನಂತ ಕೇಳಿದ.

"ಬರ್ತೀನಿ ಯಾವಾಗಲಾದರೂ"

ಮನೆಗೆ ಹಿಂತಿರುಗಿ ಬರುವಾಗ ಅನಂತ ರಾಮನಾಥನ ಯೋಚನೆ ಯನ್ನೇ ಮಾಡುತ್ತಿದ್ದ. ಅವನ ನೆನಪು ಮಾಸುವಷ್ಟರಲ್ಲಿ ಅವನೇ ಮತ್ತೆ ಭೇಟಿಯಾಗಿದ್ದ. ಅವನ ದರ್ಶನದಿಂದಾಗಿ ಅನಂತನಿಗೆ ಮತ್ತೆ ಕಲ್ಯಾಣಿಯ ಮದುವೆಯ ಯೋಚನೆ ತಲೆಗೆ ಹತ್ತಿತು.

ಮನೆಗೆ ಬಂದವನೇ ಅನಂತ ಮತ್ತೆ ತಾಯಿತಂದೆಯವರೊಡನೆ ರಾಮ ನಾಥನ ವಿಷಯವನ್ನು ಪ್ರಸ್ತಾಪಿಸಿದ. ವೆಂಕಟಾಚಲಯ್ಯನವರು ನಿಟ್ಟು ಸಿರಿನೊಡನೆ ಹೇಳಿದರು:

"ಪಾಪ, ಅವನ ಹಣೆಯಲ್ಲಿ ಏನೇನು ಬರೆದಿದೆಯೋ ?"

ಕೂಡಲೇ ಅನಂತ, ವಿಜಯಮ್ಮ ಇಬ್ಬರೂ ಅವರನ್ನು ತರಾಟೆಗೆ ತೆಗೆದುಕೊಂಡರು.

“ಮದುವೇಂದರೆ ಅಷ್ಟೊಂದು ಭಯಂಕರವೇ? ಈಗ ಅನಂತ ಹೇಗಿದಾನೆ? ನೀವು ಹೇಗಿದೀರಿ....”

“ನಾನು ಹೇಗಿದೀನಿ ಅನ್ನೋದು ನನಗೆ ಗೊತ್ತು. ಮೂಕ ಪ್ರಾಣಿ ತನ್ನ ಸಂಕಟ ಹೇಳಿಕೊಳ್ಳಬಲ್ಲದೇ?”

“ಮದುವೇಂದ್ರೆ ಅಷ್ಟು ಬೇಜಾರುಪಟ್ಟುಕೊಳ್ಳೋರು ನನ್ನ ಕೊರಳಿಗೆ ತಾಳಿ ಯಾಕೆ ಕಟ್ಟಿದಿರಿ?” ವಿಜಯಮ್ಮ ಕೇಳಿದರು.

“ನಿಮ್ಮಪ್ಪ ಬಂದು ನನ್ನ ಕೇಳಿದಾಗ ನಾನೇನು ಹೇಳಿದೆ ಗೊತ್ತೆ?”

“ಏನು....” ಅನಂತ ಉತ್ಸುಕತೆಯಿಂದ ಕೇಳಿದ.

“ಅವರಿಗೆ ನಾನು, ‘ನೋಡಿ ಸ್ವಾಮಿ, ನನ್ನ ಡ್ರಾಯರಿನಲ್ಲಿ ನಾನು ಸದಾ ಆರ್ಸೆನಿಕ್ ಇಟ್ಟುಕೊಂಡಿರುತ್ತೀನಿ. ಯಾವ ದಿನ ನನಗೆ ಬಾಳಿನಲ್ಲಿ ಬೇಸರ ಬರುತ್ತದೋ ಆ ದಿನ ಇದನ್ನು ನುಂಗಿಬಿಡುತ್ತೇನೆ. ನಿಮಗೆ ಧೈರ್ಯವಿದ್ದರೆ ಹೆಣ್ಣು ಕೊಡಿ’ ಎಂದೆ.”

“ಆಮೇಲೆ?” ಅನಂತ ಕೇಳಿದ.

“ನಿಮ್ಮ ಅಮ್ಮನ್ನ ನನಗೆ ಕೊಟ್ಟು ಮದುವೆ ಮಾಡಿದರು ಅವರು—ಧೈರ್ಯವಾಗಿ.”

“ಆರ್ಸೆನಿಕ್ ಏನು ಮಾಡಿದೆ ಅಣ್ಣಾ?” ಅನಂತ ಕುತೂಹಲದಿಂದ ಕೇಳಿದ.

“ಹೆಂಡತೀನೇ ಬಂದಳಲ್ಲಾ ಆರ್ಸೆನಿಕ್‌ಗೆ ಬದಲಾಗಿ ಎಂದುಕೊಂಡು ಅದನ್ನ ಆಚೆಗೆಸೆದೆ.”

ಅನಂತನಿಗೆ ನಗು ಹಿಡಿಸದಾಯಿತು.

“ಅಮ್ಮನಿಗೆ ತೀರಾ ಅನ್ಯಾಯ ಅಣ್ಣ. ಗಂಟಲೊಂದರ ಹೊರತು ಉಳಿದೆಲ್ಲ ವಿಷಯಗಳಲ್ಲೂ ಅಮ್ಮನ ಸಮಾನ ಬೇರೆ ಯಾರೂ ಇಲ್ಲ.”

“ಆರ್ಸೆನಿಕ್ ಎಂದರೇನೋ ಅನಂತ?” ವಿಜಯಮ್ಮ ಯಾವುದೂ ಅರ್ಥವಾಗದೆ ಕೇಳಿದರು.

“ಅದೊಂದು ತರಹದ ವಿಷ.”

“ವಿಷ ತಿನ್ನೋಕೆ ಬದಲು ನನ್ನ ಕಟ್ಟಿಕೊಂಡೇಂತ ತಾನೆ ಇವರು ಹೇಳೋದು. ಸಾರ್ಥಕವಾಯಿತು....”

ವೆಂಕಟಾಚಲಯ್ಯನವರು ಜಾಣತನದಿಂದ ಮಾತಿನ ವಾಹಿನಿಯನ್ನು ಮತ್ತೆ ಕಲ್ಯಾಣಿಯ ಮದುವೆಯ ಕಡೆ ತಿರುಗಿಸಿದರು.

"ನೋಡೋಣ, ಅವನು ಮನೆಗೆ ಬಂದಾಗ ಸೂಕ್ಷ್ಮವಾಗಿ ವಿಚಾರಿಸಿದರಾಯಿತು" ಎಂದು ವಿಜಯಮ್ಮ ಮಾತು ಮುಗಿಸಿದರು.

ಕಲ್ಯಾಣಿಗೂ ಈ ವಿಷಯ ಅಲ್ಪಸ್ವಲ್ಪ ತಿಳಿಯಿತು. ಮದುವೆ ಎಂದ ಕೂಡಲೇ ಅವಳ ಮನಸ್ಸಿನಲ್ಲಿ ಯಾವ ವಿಧವಾದ ಮಧುರ ಭಾವನೆಯೂ ಸುಳಿಯಲಿಲ್ಲ.

ನಾಲ್ಕಾರು ದಿನ ಗದ್ದಲ–ಕೆಲವು ಸೊಗಸಾದ ಸೀರೆಗಳ ಉಡುಗೊರೆ—ಒಂದೆರಡು ಒಡವೆಗಳು–ಒಬ್ಬ ತರುಣನೊಡನೆ ಬೇರೆ ಮನೆಗೆ ಹೋಗುವುದು–ಅಂದ ಹಾಗೆ ಆ ತರುಣ ರಾಮನಾಥನಾಗಬಹುದೇನೋ ?

ಒಂದೆರಡು ದಿನಗಳು ಕಳೆದವು. ಮತ್ತೊಂದು ದಿನ ಕಲ್ಯಾಣಿ ಗೆಳತಿಯರೊಡನೆ ವಸ್ತುಪ್ರದರ್ಶನಕ್ಕೆ ಹೋದಾಗ ಅಲ್ಲಿ ಮತ್ತೆ ರಾಮನಾಥನ ಭೇಟಿಯಾಯಿತು.

ಸ್ಟಾಲನ್ನು ಬಿಟ್ಟು ಕಲ್ಯಾಣಿಯೊಡನೆ ಸುತ್ತುವ ಆಸೆಯಾಯಿತು, ರಾಮನಾಥನಿಗೆ. ಆ ಮಹರಾಯಿತಿ ತನ್ನ ಗೆಳತಿಯರಿಬ್ಬರ ಪರಿಚಯಮಾಡಿಕೊಟ್ಟರೆ ಸಾಕು, ಏನಾದರೂ ನೆಪ ತೆಗೆದು ಅವರೊಡನೆ ಹೋಗಬೇಕೆಂದು ಅವನು ಬಯಸಿದ್ದ.

ಆದರೆ ಕಲ್ಯಾಣಿ ತನ್ನ ಗೆಳತಿಯರ ಪರಿಚಯ ಅವನಿಗೆ ಮಾಡಿಕೊಡಲೇ ಇಲ್ಲ. ಆದರೂ ರಾಮನಾಥ ಸೂಕ್ಷ್ಮವಾಗಿ ಕೇಳಿದ:

"ಮೂರೇ ಜನ ಬಂದಿದೀರೇನು ?"

"ಹೂಂ."

"ರಾತ್ರಿ ಮನೆಗೆ ಹೋಗುವಾಗ ಪರವಾಗಿಲ್ಲವಾ ?"

"ಗಾಡಿ ಮಾಡಿಕೊಂಡು ಹೋಗ್ತೀವಿ."

"ಬೇಕಾದರೆ ಜೊತೆಗೆ ನಾನೂ ಬರಲೇನು ?"

"ಬೇಡ. ಈ ಬ್ಯೂಟಿ ಸೆಲೂನಿನ ವರ್ಣನೆ ನಿಮ್ಮಷ್ಟು ಚೆನ್ನಾಗಿ ಬೇರೆ ಯಾರೂ ಮಾಡಲಾರರು."

ರಾಮನಾಥನಿಗೆ ನಿರಾಸೆಯಾಯಿತು. ತನ್ನನ್ನು ನೋಡಿಯೂ ಅವಳು

ಔಪಚಾರಿಕವಾಗಿಯಾದರೂ 'ಮನೆಯ ಕಡೆ ಯಾಕೆ ಬರಲಿಲ್ಲ?' ಎಂದು ಪ್ರಶ್ನಿಸಿರಲಿಲ್ಲ.

ಹಾಗಾದರೆ ತಾನು ಹೋಗುವುದು ಅವಳಿಗೆ ಇಷ್ಟವಿಲ್ಲವೇನೋ? ಕಲ್ಯಾಣಿಯೇ ಬಾಯಿಬಿಟ್ಟು ಒಂದು ಸಲ ತನ್ನನ್ನು ಆಹ್ವಾನಿಸಲಿ ಎಂದು ಅವನ ಆಸೆ.

"ಏನೋ ನಿಮ್ಮ ಮನೆಗೆ ಬರೋಕಾಗಲಿಲ್ಲ. ನಿಮ್ಮಣ್ಣ ಏನಾದರೂ ತಿಳಿದುಕೊಂಡರೇನೋ?" ಅವನು ಮತ್ತೆ ಕೇಳಿದ.

"ಏನಿಲ್ಲ ನಿಮ್ಮ ಸಂದರ್ಭ ಹೇಗಿದೆಯೋ?" ಎಂದು ಕಲ್ಯಾಣಿ ಅಡ್ಡ ಗೋಡೆಯ ಮೇಲೆ ದೀಪವಿಟ್ಟ ಹಾಗೆ ಮಾತನಾಡಿದಳು.

ರಾಮನಾಥ ಸೋತು ಹೇಳಿದ, "ನಾಳೆ ದಿನ ನಾನು ಬರ್ತೀನಿ ಅಂತ ನಿಮ್ಮ ಅಣ್ಣನಿಗೆ ಹೇಳಿ.

"ಆಗಲಿ ಎಷ್ಟು ಹೊತ್ತಿಗೆ ಬರ್ತೀರಾ?"

ಅವಳ ಪ್ರಶ್ನೆ ಸೋತು ನಿರಾಶೆಗೊಂಡಿದ್ದ ಅವನ ಮನಸ್ಸಿಗೆ ತಂಪನ್ನೆರೆಯಿತು. ಅವನ ಮುಖ ಗೆಲುವಾಯಿತು.

ಅವನನ್ನು ಪ್ರಶ್ನಿಸುವಾಗ ಕಣ್ಣುಗಳು ಮಿಂಚಿದಂತಿತ್ತು ಅಲ್ಲವೇ?

"ಬೆಳಿಗ್ಗೇನೇ ಬರ್ತೀನಿ."

ಕಲ್ಯಾಣಿ ಹೊರಟಳು. ಹೊರಟು ನಿಂತಿದ್ದ ಅವಳನ್ನು ತಡೆದು ರಾಮನಾಥ ಕೇಳಿದ.

"ಏರೋಪ್ಲೇನು ಹೇಗೆ ಮಾಡ್ತಾರೆ ಅಂತ ನಿಮ್ಮ ಗೆಳತಿಯರಿಗೆ ತಿಳಿದುಕೊಳ್ಳಲು ಆಸೆ ಇಲ್ಲವೇ?"

"ಅಯ್ಯೋ ಬೇಡ ಕಣೆ. ಅದನ್ನು ಕಟ್ಟಿಕೊಂಡು ನಾವೇನು ಮಾಡೋಣಾ" ಎಂದೊಬ್ಬಳು ರಾಗ ಎಳೆದಳು.

"ನಾವೇನು ಏರೋಪ್ಲೇನು ಬಿಡಬೇಕೆ?" ಎಂದು ಮತ್ತೊಬ್ಬಳು ಜಾಣತನದ ತರ್ಕ ಹೂಡಿದಳು.

ರಾಮನಾಥನಿಗೇಕೋ ರೇಗಿತು. ಕಲ್ಯಾಣಿಯನ್ನು ಇನ್ನೊಂದು ಗಳಿಗೆ ಅಲ್ಲಿಯೇ ನಿಲ್ಲಿಸಿಕೊಳ್ಳುವ ಅಪೇಕ್ಷೆಯಿಂದ, ಅವಳನ್ನು ನೋಡಿ ಕಣ್ಣಿಗೆ ಹಬ್ಬವನ್ನುಂಟುಮಾಡಿಕೊಳ್ಳುವ ಹಂಬಲದಿಂದ ಅವನು ಹಾಗೆ

ಹೇಳಿದ್ದ. ಅವನಿಗೇನೂ ಆವರ ಮನಸ್ಸಿನಲ್ಲಿ ಜ್ಞಾನಬೀಜ ನೆಡುವ ಉದ್ದೇಶ ವಿರಲಿಲ್ಲ.

ಪ್ರಶ್ನೆಯ ಹಿಂದೆ ಕೇವಲ ಸ್ವಾರ್ಥ ಇತ್ತು. ಅವನು ವ್ಯಂಗ್ಯವಾಗಿ ಹೇಳಿದ.

"ತರಳೆಯರಿಗ್ಯಾಕೆ ಏರೋಪ್ಲೇನು ಬಿಡುವ ಯೋಚನೆ. ಏರೋಪ್ಲೇನು ಬಿಡುವಾಗ ಅಕಸ್ಮಾತ್ ಜಿರಲೆಯೊಂದು ಬಂದರೆ ಗತಿ?"

ತನ್ನ ಮಾತು ಕೇಳಿ ಕಲ್ಯಾಣಿ ರೇಗಬಹುದು ಎಂದು ಅವನು ನಿರೀಕ್ಷಿಸಿದ್ದ. ಆದರೆ ಅವನ ನಿರೀಕ್ಷೆಗೆ ವ್ಯತಿರಿಕ್ತವಾಗಿ ಕಲ್ಯಾಣಿ ನಕ್ಕು ಬಿಟ್ಟಳು.

ಅವಳು ನಗುನಗುತ್ತಾ ಸ್ಟಾಲಿನಿಂದ ಹೊರಗೆ ಹೊರಟು ಜನಗಳ ಗುಂಪಿನಲ್ಲಿ ಮರೆಯಾದಳು.

ರಾಮನಾಥ ಅಲ್ಲಿಯೇ ಇದ್ದ ಬೆಂಚೊಂದರ ಮೇಲೆ ಕುಸಿದು ಕುಳಿತ.

ನಾಳೆ ಬೆಳಿಗ್ಗೆ ಅವರ ಮನೆಗೆ ಹೋಗುವವರೆವಿಗೆ ಅವನಿಗೆ ಹಗಲು ಗನಸು ಕಾಣಲು ಅವಳ ನಗು, ಆಕರ್ಷಕವಾಗಿದ್ದ (ಅವನ ಪಾಲಿಗೆ) ಅವಳ ಮುಖ ಸಹಾಯಕವಾದವು.

"ಎಷ್ಟು ಹೊತ್ತಿಗೆ ಬರ್ತಿರಾ?" ಎಂಬ ಕಲ್ಯಾಣಿಯ ಪ್ರಶ್ನೆಯನ್ನೇ ರಾಮನಾಥ ಮತ್ತೆ ಮತ್ತೆ ಮೆಲುಕು ಹಾಕಿದ. ಹಾಗೆ ಕೇಳುವಾಗ ಅವಳ ಕಣ್ಣುಗಳು ಪ್ರೇಮದ ಹೊಳಪಿನಿಂದ ಹೆಚ್ಚು ಕಾಂತಿಯುಕ್ತವಾದಂತೆ ಅವನಿಗೆ ಭಾಸವಾಯಿತು.

ಕೇಸರಿ ಬಣ್ಣದ ಸೀರೆಯುಟ್ಟು, ತನ್ನ ಸ್ಟಾಲಿನ ಮುಂದೆ ಓಡಾಡಿದ ಹುಡುಗಿಯರನ್ನೆಲ್ಲಾ ರಾಮನಾಥ ಕಣ್ಣರಳಿಸಿ ನೋಡುತ್ತಿದ್ದ. ಆದರೆ ಕಲ್ಯಾಣಿ ಮತ್ತೆ ಅವನ ಸ್ಟಾಲಿನ ಮುಂದೆ ಸುಳಿಯಲಿಲ್ಲ.

ಕಲ್ಯಾಣಿ ಅನಂತನಿಗೆ ಶುಭ ಸುದ್ದಿಯನ್ನು ತಿಳಿಸಿದಳು. ಆದರೆ ಅನಂತ ತಾನಾಗಿಯೇ "ರಾಮನಾಥ ಸಿಕ್ಕಿದ್ದರೇನೇ?" ಎಂದು ಕೇಳುವವರೆವಿಗೆ ಅವಳಿಗೆ ಅವನ ನೆನಪೇ ಬಂದಿರಲಿಲ್ಲ. ಅವಳು ತನ್ನ ಕೇಸರಿ ಬಣ್ಣದ ಸೀರೆ ಮಳೆಯ ಹನಿಯಲ್ಲಿ ಸ್ವಲ್ಪ ನೆನೆಯಿತಲ್ಲಾ ಎಂಬ ಚಿಂತೆಯಲ್ಲಿ ಮುಳುಗಿದ್ದಳು.

"ಹೂಂ ಸಿಕ್ಕಿದ್ದರಪ್ಪಾ ನಿನ್ನ ಸ್ನೇಹಿತರು"

"ಮನೆ ಕಡೆ ಯಾಕೆ ಬರಲಿಲ್ಲಾಂತ ಕೇಳಬೇಕಾಗಿತ್ತು."

"ಕೇಳೋದೇನು ? ಬರಬೇಕೆನ್ನುವ ಮನಸಿದ್ದರೆ ಅವರೇ ಬರುತ್ತಾರೆ. ನಾಳೆ ಬೆಳಿಗ್ಗೆ ಬರುತ್ತಾರಂತೆ."

"ಖಂಡಿತ ಬನ್ನಿ ಎಂದು ಹೇಳಬೇಕಾಗಿತ್ತು."

"ಹಾಗೆಲ್ಲಾ ಒತ್ತಾಯ ಮಾಡುವುದು ನನ್ನ ಜೀವಮಾನಕ್ಕೇ ಬಂದಿಲ್ಲ"

"ಉಪಚಾರ ಮಾಡೋದನ್ನ ಕಲಿತುಕೊಳ್ಳಬೇಕಮ್ಮ" ಎಂದು ಅನಂತ ತಂಗಿಗೆ ಉಪದೇಶ ಮಾಡಿದ. ಸುಮಾರು ಹತ್ತು ನಿಮಿಷಗಳ ಕಾಲ ಒಂದು ಪುಟ್ಟ ಉಪನ್ಯಾಸ ಮಾಡಿ,

"ತಿಳಿಯಿತಾ?" ಎಂದು ಕೇಳಿದ.

ಕಲ್ಯಾಣಿ ಗಲ್ಲಕ್ಕೆ ಕೈಕೊಟ್ಟು ಕೊಂಚ ಅನ್ಯಮನಸ್ಕಳಾಗಿ ನುಡಿದಳು.

"ಅನ್ಯಾಯವಾಗಿ ನನ್ನ ಸೀರೆ ನೆನದು ಹೋಯಿತು."

"ನಿನ್ನ ಸೀರೆ ಹರಿದು ತುಕ್ಕಡ ಆಗಿದ್ದರೆ ನನಗೆ ಹೆಚ್ಚು ಸಂತೋಷ ವಾಗ್ತಿತ್ತು" ಎಂದು ಸಿಡುಕಿದ ಅನಂತ.

ಮಾರನೆಯ ದಿನ ಬೆಳಗಾಗುತ್ತಲೇ ಕಲ್ಯಾಣಿ ಎಂದಿನಂತೆಯೇ ನಿಟ್ಟಿಂಗ್ ಕಡ್ಡಿ ಕೈಲಿ ಹಿಡಿದು ಹೊರಗೆ ಹೊರಟಳು. ಅದನ್ನು ಕಂಡು ಅನಂತ, ವಿಜಯಮ್ಮ ಇಬ್ಬರೂ ಪ್ರತಿಭಟಿಸಿದರು.

"ರಾಮನಾಥ ಬರ್ತಾರೆ. ಹೊರಗೆ ಹೋಗಬೇಡ" ಎಂದ ಅನಂತ.

"ಅವರು ಬಂದರೆ ನನಗೇನು? ಅವರು ಅನಂತನ ಸ್ನೇಹಿತರು. ಅನಂತ ಮನೆಯಲ್ಲಿರಬೇಕಾದುದು ನ್ಯಾಯ"

"ನನ್ನ ಉರಿಸಬೇಡ ಕಣೇ" ಎಂದು ವಿಜಯಮ್ಮ ಕೂಗಿದರು.

"ನೀನು ಸುಮ್ಮನಿರಮ್ಮ. ನಾನು ಅವಳನ್ನು ಒಪ್ಪಿಸುತ್ತೇನೆ" ಎಂದು ಹೇಳಿ, ಅನಂತ ತಂಗಿಯನ್ನು ಎದುರಿಗೆ ಕೂರಿಸಿಕೊಂಡು ಸುಮಾರು ಅರ್ಧ ಗಂಟೆ ಉಪನ್ಯಾಸ ಮಾಡಲು ನಿಶ್ಚಯಿಸಿದ.

ಅವನು ಕುಳಿತುಕೊಳ್ಳುವ ರೀತಿಯಲ್ಲೇ ಕಲ್ಯಾಣಿಗೆ ಮನದಟ್ಟಾ ಯಿತು—ಉಪನ್ಯಾಸ ತಪ್ಪಿದ್ದಲ್ಲ ಎಂದು.

ಅವಳು ಅನಂತನ ಕಡೆ ತಿರುಗಿ

"ಉಪನ್ಯಾಸವೆಲ್ಲಾ ಮುಗಿದ ಮೇಲೆ ನನ್ನ ಎಬ್ಬಿಸಿಬಿಡಪ್ಪ" ಎಂದು ಹೇಳಿ ಕಣ್ಣು ಮುಚ್ಚಿಕೊಂಡಳು.

ಆದರೂ ಅನಂತ ಬಿಡಲಿಲ್ಲ.

ಕಣ್ಣು ಮುಚ್ಚಿ ಕುಳಿತಿದ್ದ ತಂಗಿಯ ಎದುರಿಗೆ ಅರ್ಧಗಂಟೆ ಮಾತನಾಡಿದ. ಅವನ ಮಾತು ಮುಗಿದ ಮೇಲೆ ಕಲ್ಯಾಣಿ ಕಣ್ಣುಬಿಟ್ಟು,

"ಮುಗಿಯಿತೇನ್ರೀ?" ಎಂದಳು.

"ಮುಗೀಲಿಲ್ಲ. ಇನ್ನೂ ಈಗ ಶುರುವಾಗಿದೆ"

"ಏನು ಶುರುವಾಗಿರೋದು?" ಎನ್ನುತ್ತಾ ರಾಮನಾಥ ಒಳಗೆ ಬಂದ. ಅನಂತ ಗೆಳೆಯನನ್ನು ಸಂಭ್ರಮದಿಂದ ಸ್ವಾಗತಿಸಿದ. ಕಲ್ಯಾಣಿ ಅವನ ಕಡೆ ನೋಡಿ ನಸುನಕ್ಕು

"ಸುಸ್ವಾಗತ" ಎಂದಳು.

"ಏನಪ್ಪಾ ಈಗ ತಾನೆ ಶುರುವಾಗಿದ್ದು?" ಎಂದು ರಾಮನಾಥ ಮತ್ತೆ ಕೇಳಿದ.

"ಅಣ್ಣ-ತಂಗಿಯರ ಜಗಳ" ಎಂದುತ್ತರ ಕೊಟ್ಟಳು ಕಲ್ಯಾಣಿ ಶಾಂತವಾದ ದನಿಯಿಂದ.

ವಿಜಯಮ್ಮ, ವತ್ಸಲ, ವೆಂಕಟಾಚಲಯ್ಯ ಎಲ್ಲರೂ ಹೊರಗೆ ಬಂದು ರಾಮನಾಥನನ್ನು ವಿಚಾರಿಸಿದರು. ಅವನಿಗೆ ಈ ಬಾರಿ ಸಿಕ್ಕಿದ ಸ್ವಾಗತ ಸಂಪೂರ್ಣವಾಗಿ ಬೇರೆ ರೀತಿಯದು. ರಾಮನಾಥನಿಗೆ ಅವರ ಉಪಚಾರ ಕಂಡು ಕ್ಷಣಕಾಲ ಭ್ರಾಂತಿಯುಂಟಾಯಿತು. ಯಾವ ಬಗೆಯ ಬದಲಾವಣೆಯೂ ಇಲ್ಲದವಳೆಂದರೆ ಕಲ್ಯಾಣಿ.

"ಇವತ್ತೇನು ಸ್ಕೂಲಿನಿಂದ ಬಿಡುಗಡೆಯೋ?" ಅನಂತ ಕೇಳಿದ.

"ಹೂಂ. ಇವತ್ತು ಬಿಡುಗಡೆ ಮಾಡಿಕೊಂಡೆ-ಸ್ವಲ್ಪಹೊತ್ತು ನಿಮ್ಮಗಳೊಡನೆ ಆರಾಮವಾಗಿ ಕಾಲ ಕಳೆಯೋಣವೆಂದು." ಹಾಗೆನ್ನುವಾಗ ರಾಮನಾಥ ಕಲ್ಯಾಣಿಯ ಕಡೆ ನೋಡಿದ.

"ಧನ್ಯರಾದೆವು" ಎಂದಳು ಕಲ್ಯಾಣಿ ನಾಟಕೀಯವಾಗಿ. ಅಣ್ಣನ ಭಾಷಣ ಅವಳ ಮೇಲೆ ತನ್ನ ಪ್ರಭಾವ ಬೀರಿತ್ತು. ಆದರೆ ಮಾತಿನಲ್ಲಿ ಸಹಜತೆ ಮಾಯವಾಗಿತ್ತು.

"ಸ್ವಲ್ಪ ಹೊತ್ತು ಇಲ್ಲಿದ್ದರೆ ಆಗದು. ಈ ದಿನ ನಮ್ಮಲ್ಲಿಯೇ ಇರಬೇಕು—" ಎಂದ ಅನಂತ.

"ಈಗ ನಿನ್ನ ಗಮನ ಅವರ ಕಡೆ ತಿರುಗಿತೇನೋ? ಪಾಪ! ಇಷ್ಟು ಹೊತ್ತೂ ನಿನ್ನ ಮಾತಿನ ಧಾಳಿ ನನ್ನ ಮೇಲಾಯಿತು. ಒಂದು ಹೊತ್ತು ನಮ್ಮ ಮನೆಯಲ್ಲಿ ಕಳೆಯುವ ತಪ್ಪಿಗೆ ಅವರಿಗೆ ಅಷ್ಟೊಂದು ಕಠಿಣ ಶಿಕ್ಷೆ ಬೇಡ...." ಎಂದಳು ಕಲ್ಯಾಣಿ.

ಅನಂತ ಕಲ್ಯಾಣಿಯನ್ನು ಗದರಿಸಿದ.

ರಾಮನಾಥ ದೊಡ್ಡದಾಗಿ ನಕ್ಕ–ಬಾಯಿ ತುಂಬಾ, ಹೃದಯದ ತುಂಬಾ.

ಅವನ ಮುಖ ಚಿಕ್ಕ ಹುಡುಗನ ಮುಖದಂತೆ ಕಾಣಿಸಿತು. ಅವನ ನಗುಮುಖ ಕಂಡು ಕಲ್ಯಾಣಿ ಹೊರಗೆ ಹೋಗುವ ಯೋಚನೆಯನ್ನು ಬಿಟ್ಟು ಕೊಟ್ಟಳು. ಯಾವುದಕ್ಕೂ ಹೆಚ್ಚಿನ ಗಮನ ಕೊಡದ ಕಲ್ಯಾಣಿ ರಾಮನಾಥನ ನಗುಮುಖಕ್ಕೆ ಮರುಳಾದಳು.

ಅವನು ಯಾವಾಗಲೂ ಹಾಗೆಯೇ ನಗುತ್ತಿರಬೇಕು—ತಾನು ಅವನನ್ನು ನೋಡುತ್ತಿರಬೇಕು.

ಎಂತಹ ಮೋಹಕ ನಗೆ!

ಕೃಷ್ಣನ ಮುರುಳೀನಾದದಲ್ಲಿ ಗೋಪಿಯರಿಗಿದ್ದ ಸೆಳೆತವಿತ್ತು ಅವನ ನಗುವಿನಲ್ಲಿ.

ಕಣ್ಣುಗಳ ತಿಳಿನೀರ ಕೊಳದಲ್ಲಿ ಸುಳಿದ ನಗುವಿನ ತರಂಗ ಕೆನ್ನೆಯ ಮೇಲೆ ಹರಿದಾಡಿ, ಅವನ ಒರಟು ಗಲ್ಲದ ಮೇಲೊಂದು ಆಳವಾದ ಹಳ್ಳವನ್ನು ಕೊರೆದು ಗಲ್ಲವನ್ನು ಎರಡಾಗಿಸಿ, ಅಲ್ಲಿಂದ ಬುಗ್ಗೆ ಬುಗ್ಗೆಯಾಗಿ ತುಟಿಯ ಬಿರುಕಿನಿಂದ ಚಿಮ್ಮಿ ಬರುತ್ತಿತ್ತು.

ಹಾಗೆ ನಗುವಾಗ ರಾಮನಾಥ ಮುಗ್ಧ ಶಿಶು.

ಅವನನ್ನು ನೋಡುವಾಗ ಕಲ್ಯಾಣಿ ಮಂತ್ರಮುಗ್ಧ ಹೆಣ್ಣು.

"ನೀವು ತುಂಬಾ ಚೆನ್ನಾಗಿ ನಗ್ತೀರಿ. ನಗುವಾಗ ತುಂಬಾ ಚೆಲುವಾಗಿ ಕಾಣ್ತೀರಿ" ಎಂದು ಮೆಚ್ಚುಗೆಯ ನುಡಿಯನ್ನಾಡಲು ಅವಳ ನಾಲಿಗೆ ತವಕಿಸಿತು.

ಆದರೆ ಅನಂತ ಎದುರಿಗಿದ್ದುದರಿಂದ ಕಲ್ಯಾಣಿ ಸುಮ್ಮನಾದಳು. ಮನಸ್ಸಿನಲ್ಲಿ ಮೂಡಿದ ಭಾವನೆಯನ್ನು ತಟ್ಟನೆ ಬಾಯಲ್ಲಿ ಆಡುವ ಸ್ವಭಾವದವಳಾದ ಕಲ್ಯಾಣಿಗೆ ತನ್ನ ಭಾವನೆಯನ್ನು ನುಂಗಿಕೊಳ್ಳುವುದು ಬಹಳ ಕಷ್ಟವಾಯಿತು.

ಅನಂತ, ರಾಮನಾಥ ಮಾತನಾಡುತ್ತಾ ರೂಮಿನಲ್ಲಿ ಕುಳಿತರು. ಒಳಗಡೆ ಅಡುಗೆಯ ಸಿದ್ಧತೆ ನಡೆದಿತ್ತು.

ಕಲ್ಯಾಣಿ ಹತ್ತಿರದಲ್ಲಿಲ್ಲವೆಂಬ ಧೈರ್ಯದಿಂದ ಅನಂತ ಮಾತಿಗೆ ಮೊದಲುಮಾಡಿದ.

"ಯಾಕೆ ತಾವಿನ್ನೂ ಬ್ರಹ್ಮಚಾರಿಗಳಾಗಿದೀರಿ? ಒಳ್ಳೆಯ ಕೆಲಸವಿದೆ. ಮದುವೆ ಯಾಕೆ........"

"ಏನು ಮದುವೆಯೋ" ಎಂದ ರಾಮನಾಥ.

"ಮದುವೆ ಎಂದರೆ ಅಷ್ಟು ಹೆದರಿಕೆಯೇ?"

"ಹೆದರಿಕೆ ಏನಿಲ್ಲ. ಆದರೆ ನನಗೆ ಸರಿಯಾದ ಹುಡುಗಿ ಸಿಕ್ಕಿಲ್ಲ"

"ಸರಿಯಾದ ಹುಡುಗಿ ಅಂದರೆ?"

"ನಾನು ಹೇಳಿದಂತಹ ಹುಡುಗಿಯನ್ನು ನನಗೆ ಕೊಡಿಸುತ್ತೀರಾ?" ರಾಮನಾಥ ನಗುತಾ ಕೇಳಿದ.

"ನೋಡೋಣ"

"ಅವಳು ವಿದ್ಯಾವತಿಯಾಗಿರಬೇಕು. ನೋಡೋದಿಕ್ಕೆ ತುಂಬಾ ಲಕ್ಷಣವಾಗಿರಬೇಕು......"

ಅನಂತ ಕೊಂಚ ಪೆಚ್ಚಾದ. ಅನಂತನ ದೃಷ್ಟಿಯಲ್ಲಿ ಕಲ್ಯಾಣಿ 'ತುಂಬಾ ಲಕ್ಷಣವಾದವಳು' ಎನಿಸಿಕೊಂಡಿರಲಿಲ್ಲ.

"ಹುಡುಕಿ ನೋಡಬೇಕು. ಒಟ್ಟನಲ್ಲಿ ಸರಿಯಾದ ಹುಡುಗಿ ಸಿಕ್ಕಿದರೆ ನೀವು ಮದುವೆಯಾಗುತ್ತೀರಿ. ಅಲ್ಲವೇ?"

"ಹೌದು"

ಅನಂತನಿಗೆ ಕಲ್ಯಾಣಿಯ ಸುದ್ದಿಯನ್ನೆತ್ತುವ ಧೈರ್ಯವಾಗಲಿಲ್ಲ. ರಾಮನಾಥನನ್ನು ಇನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ಅನಂತರ ಕಲ್ಯಾಣಿಯ ವಿಷಯ ಎತ್ತಬೇಕೆಂದು ಅವನು ನಿರ್ಧರಿಸಿದನು.

ಊಟ ಮುಗಿದಮೇಲೆ ವಿಜಯಮ್ಮ, ವೆಂಕಟಾಚಲಯ್ಯನವರೂ ರಾಮನಾಥನ ಬಳಿ ಕುಳಿತುಕೊಂಡರು. ವಿಜಯಮ್ಮನಂತೂ ಹಳೆಯ ಕಾಲದವರಾದುದರಿಂದ ರಾಮನಾಥನಿಗೆ ಬಳಸಿ ಬಳಸಿ ಪ್ರಶ್ನೆಗಳನ್ನು ಹಾಕದೆ ನೇರವಾಗಿ ತಲೆಯ ಮೇಲೆ ಹೊಡೆದಂತೆ ಕೇಳಿದರು.

"ನಿಮಗೆಷ್ಟಪ್ಪಾ ಸಂಬಳ ?"

"ಹಾಗೆಲ್ಲಾ ಕೇಳಬಾರದು ಕಣೆ. ಈಗಿನ ಕಾಲದ ಹುಡುಗರು ತಪ್ಪು ತಿಳಿದುಕೊಳ್ಳುತ್ತಾರೆ" ಎಂದು ವೆಂಕಟಾಚಲಯ್ಯ ಬಾಯುಪಚಾರಕ್ಕೆ ಹೇಳಿದರೂ ಉತ್ತರ ತಿಳಿದುಕೊಳ್ಳುವ ಕುತೂಹಲ ಅವರಿಗಿತ್ತು.

"ಬರುತ್ತೆ ಹೊಟ್ಟೆಗೆ, ಬಟ್ಟೆಗೆ ಸಾಕಾಗುವಷ್ಟು" ಎಂದು ರಾಮನಾಥ ಜಾಣತನದಿಂದ ಉತ್ತರಕೊಟ್ಟ.

"ಇಷ್ಟು ವಿದ್ಯಾವಂತರಾಗಿ ಅಷ್ಟೂ ಬರದೆ" ಎಂದು ದೇಶಾವರಿ ನಗೆ ನಕ್ಕರು ವೆಂಕಟಾಚಲಯ್ಯ.

ವಿಜಯಮ್ಮ ಮತ್ತೆ ರಾಮನಾಥನ ತನಿಖೆಗೆ ಆರಂಭಿಸಿದರು.

"ಅಪ್ಪ, ಅಮ್ಮ ಇದಾರಾ ?"

"ನಾನು ಮೈಸೂರಿಗೆ ಬಂದಾಗ ಇದ್ದರು "

"ಅಣ್ಣ ತಮ್ಮಂದಿರು ?"

"ಇಲ್ಲ"

"ಅಕ್ಕ ತಂಗಿಯರು?"

"ಅಕ್ಕ ಇಬ್ಬರು, ತಂಗಿ ಒಬ್ಬಳು"

"ಎಲ್ಲರಿಗೂ ಮದುವೆಯಾಗಿ ಅವರವರ ಪಾಡಿಗೆ ಅವರವರ ಮನೇಲಿ ದಾರೆ ತಾನೆ ?"

"ಹೂಂ. ಆದರೆ ನನ್ನ ತಂಗಿ ಮಾತ್ರ ಬಾಣಂತನಕ್ಕೆ ನಮ್ಮ ಮನೇಗೆ ಬಂದಿದಾಳೆ"

"ಮನೆ ಸ್ವಂತದ್ದೇ?"

"ಇಲ್ಲ. ಆದರ ಬಾಡಿಗೆ ಸಲೀಸಾಗಿ ಕೊಡ್ತೀವಿ."

"ಕೊಡದೆ ಉಂಟೆ...." ಎಂದರು ವೆಂಕಟಾಚಲಯ್ಯ ದೇಶಾವರಿಯಾಗಿ.

"ಭೂಮಿ....ಕಾಣಿ...." ಎಂದು ವಿಜಯಮ್ಮ ಹೇಳುವಷ್ಟರಲ್ಲಿ ರಾಮನಾಥ....

"ಜಮೀನುದಾರರಿಗೆ ಉಳಿಗಾಲವಿಲ್ಲ ಅಂತ ಯಾವೋನೋ ನಮ್ಮ ತಂದೆಗೆ ಭವಿಷ್ಯ ಹೇಳಿದ್ದನಂತೆ. ಅದಕ್ಕೆ ಅವರು ಭೂಮಿ ತಗೊಳ್ಳೋ ತಾಪತ್ರಯಕ್ಕೇ ಹೋಗಲಿಲ್ಲ. ಈಗ ನಿರಾಳವಾಗಿದೀವಿ. ರೈತರ ಕೈಲಿ ಜಗಳ, ಗುತ್ತಿಗೆ....ಕರಾರು ಅಂತ ಯಾವುದೂ ಇಲ್ಲ. ಮನಸ್ಸಿಗೆ ಶಾಂತಿ ಇದೆ."

"ತುಂಬಾ ದೂರಾಲೋಚನೆ ಇದೆ ನಿಮ್ಮ ತಂದೆಗೆ" ಎಂದರು ವೆಂಕಟಾಚಲಯ್ಯ.

"ಆದರೆ ನಿಮ್ಮ ದುರಾಲೋಚನೆ ಏನು" ಎಂದು ಕೇಳುವ ತವಕವಾಯಿತು ರಾಮನಾಥನಿಗೆ. ಆದರೆ ಹಿರಿಯರಾದುದರಿಂದ ಅವನು ಸುಮ್ಮನಾದ.

ಅನಂತ ತಮ್ಮ ಮನೆಯಲ್ಲಿಯೇ ಊಟಮಾಡುವಂತೆ ರಾಮನಾಥನಿಗೆ ಒತ್ತಾಯ ಮಾಡಿದ. ರಾಮನಾಥ ಒಪ್ಪಿಕೊಂಡ.

ಊಟವಾದ ಮೇಲೆ ಅನಂತ ರಾಮನಾಥನನ್ನು ತನ್ನ ರೂಮಿಗೆ ಕರೆದುಕೊಂಡು ಹೋಗಿ ತಾಯಿಯ ಪರವಾಗಿ ತಾನು ಕ್ಷಮೆ ಕೇಳಿದ.

"ಪೂರ್ವಕಾಲದವರು–ಕೆಲಸಕ್ಕೆ ಬಾರದ ಪ್ರಶ್ನೆಗಳನ್ನೆಲ್ಲಾ ಕೇಳ್ತಾರೆ. ಏನೂ ತಿಳಿದುಕೊಳ್ಳಬೇಡಿ."

"ಇಲ್ಲ. ನಮ್ಮಮ್ಮನೂ ಕೊಂಚ ಹೀಗೇನೆ. ಆದರೆ ಇಷ್ಟಿಲ್ಲ. ನನಗಾಗಿ ಎಷ್ಟೋ ಸುಧಾರಿಸಿಕೊಂಡಿದಾರೆ."

"ನಾನೂ ಎಷ್ಟೋ ಹೇಳ್ತೀನಿ. ಆದರೆ ಅಮ್ಮ ಕೇಳೋಲ್ಲ."

"ಅವರವರು ಕಲಿತಿದ್ದು ಅವರವರಿಗೆ. ನಿಮ್ಮಮ್ಮ ಒಂದು ಮುಖ್ಯವಾದ ಪ್ರಶ್ನೆ ಕೇಳಲಿಲ್ಲ."

"ಯಾವುದದು ?"

"ನಿಮ್ಮ ವಯಸ್ಸೆಷ್ಟು, ಮಕ್ಕಳೆಷ್ಟು ಅಂತ ಯಾಕೆ ಕೇಳಲಿಲ್ಲಾನ್ನೋದು ನನಗೊಂದು ಸಮಸ್ಯೆಯಾಗಿದೆ."

"ನಿಮಗೆ ಮದುವೆಯಾಗಿಲ್ಲಾನ್ನೋದು ಅವರಿಗೆ ಗೊತ್ತಿದೆ" ಎಂದ

ಅನಂತ............

"ಒಂದು ನಿಮಿಷ ಬಂದೆ........" ಎನ್ನುತ್ತಾ ರಾಮನಾಥ ಎದ್ದು ಹೊರಟುಹೋದ.

ಊಟವಾಗುತ್ತಲೆ ಸಿಗರೇಟು ಸೇದದೆ ಇದ್ದುದು ರಾಮನಾಥನಿಗೆ ಹೇಗೆ ಹೇಗೋ ಆಗಿತ್ತು.

ಕಾಂಪೌಂಡಿನಲ್ಲಿದ್ದ ಮಾವಿನ ಮರವೊಂದರ ಕೆಳಗೆ ನಿಂತು ರಾಮನಾಥ ಜೇಬಿಗೆ ಕೈ ಹಾಕಿದ. ಸಿಗರೇಟು ಇದ್ದರೂ ಕಡ್ಡಿಪೆಟ್ಟಿಗೆ ಇರಲಿಲ್ಲ. ರಾಮನಾಥನಿಗೆ ಒಂದು ಗಳಿಗೆ ಏನೂ ತೋರಲಿಲ್ಲ.

ಅವನು ಮತ್ತೆ ಮುಂಬಾಗಿಲಿಗೆ ಬಂದ. ಕಲ್ಯಾಣಿ ಊಟಮಾಡಿದ ಎಲೆಗಳನ್ನು ತೆಗೆಯುತ್ತಿದ್ದಳು. ರಾಮನಾಥ ನೇರವಾಗಿ ಅವಳ ಬಳಿ ನಿಂತು

"ಕೊಂಚ ಕಡ್ಡಿಪೆಟ್ಟಿಗೆ ಬೇಕಾಗಿತ್ತು" ಎಂದ.

ಕಲ್ಯಾಣಿಗೆ ಅವನಿಗಿದ್ದ ಕೆಟ್ಟ ಚಾಳಿ ತಿಳಿದಿತ್ತು. ಅವಳು ನಗುತ್ತಾ ಒಳಗೆ ಹೋಗಿ ಕಡ್ಡಿಪೆಟ್ಟಿಗೆಯನ್ನು ತಂದುಕೊಟ್ಟು,

"ಪೆಟ್ಟಿಗೆ ನಿಮಗಲ್ಲ. ವಾಪಸ್ ಮಾಡಬೇಕು" ಎಂದಳು.

"ನಿಮ್ಮ ಕೈಗೇ ತಂದುಕೊಡ್ತೀನಿ. ಆಯ್ತಾ?" ಎನ್ನುತ್ತಾ ಆತ ಹೊರಗೆ ಹೋದ.

ರಾಮನಾಥ ದಿನವೆಲ್ಲಾ ಅವರ ಮನೆಯಲ್ಲಿ ಕಳೆದು ರಾತ್ರಿ ತನ್ನ ಬಿಡಾರಕ್ಕೆ ತೆರಳಿದ. ಅನಂತ ಸ್ವಲ್ಪ ದೂರದವರೆವಿಗೆ ಅವನೊಡನೆ ಹೋದ. ಅವನು ಹೋದ ಉದ್ದೇಶ—ಮತ್ತೆ ಅವನ ಮದುವೆಯನ್ನು ಪ್ರಸ್ತಾಪಿಸಲು.

"ಸಧ್ಯದಲ್ಲೇ ಮದುವೆ ಮಾಡಿಕೊಂಡು ನಮಗೆ ಊಟ ಹಾಕಿಸಿ" ಎಂದು ಮಾತಿಗೆ ಪ್ರಾರಂಭಿಸಿದ ಅನಂತ.

"ಊಟಕ್ಕೇನು ಯಾವಾಗ ಹಾಕಿಸಿದರೂ ಆಯಿತು"

"ನಾನು ಕೇಳಿದ್ದು ಮದುವೆಯ ಊಟ"

"ನೋಡೋಣ"

"ಸಧ್ಯದಲ್ಲಿ?"

"ಅದನ್ನ ನಾನು ಹೇಗೆ ಹೇಳಲಿ? ಸರಿಯಾದ ಹುಡುಗಿ ಸಿಕ್ಕಿದರೆ

ಸಧ್ಯದಲ್ಲಿ. ಇಲ್ಲದಿದ್ದರೆ ಇಲ್ಲ. ಇದೇನು ನೀವು ನನ್ನ ಮದುವೆಯಲ್ಲಿ ಅಷ್ಟೊಂದು ಆಸಕ್ತಿ ತೋರಿಸ್ತಿದೀರಿ?"

ಇದೇ ಸರಿಯಾದ ಸಮಯವೆಂದು ಅನಂತ ಹೇಳಿದ.

"ನನಗೊಬ್ಬಳು ಮದುವೆಗಿರುವ ತಂಗಿ ಇದ್ದಾಳೆ–ಬಲ್ಲಿರಾ?"

"ಕಲ್ಯಾಣಿ!"

ರಾಮನಾಥ ತಟಕ್ಕನೆ ರಸ್ತೆಯಲ್ಲಿ ನಿಂತುಕೊಂಡ. ಒಂದು ಗಳಿಗೆ ಅವನ ಬಾಯಿಯಿಂದ ಮಾತು ಹೊರಡಲಿಲ್ಲ.

"ಅವಳೊಬ್ಬಳಿಗೆ ನಾವು ಮದುವೆ ಮಾಡಿದರೆ ಗೆದ್ದೆವು."

"ಓ" ಎಂದು ರಾಮನಾಥ ಮುಂದಕ್ಕಡಿಯಿಟ್ಟ.

"ಏನು ಹೇಳ್ತೀರಾ?" ಅನಂತ ಮತ್ತೆ ಕೇಳಿದ.

"ನಂಗೆ ಸ್ವಲ್ಪ ಯೋಚನೆ ಮಾಡಿ ಹೇಳೋದಿಕ್ಕೆ ಅವಕಾಶ ಕೊಡಿ."

"ನೀವು ನಿಧಾನವಾಗಿ ನಿಮ್ಮ ಅಭಿಪ್ರಾಯ ತಿಳಿಸಬಹುದು."

ರಾಮನಾಥ ಏನನ್ನೋ ನೆನೆದು ನಕ್ಕ.

"ಯಾಕೆ ನಗ್ತೀರಿ?"

"ನಿಮ್ಮ ತಾಯಿ ನನ್ನ ಯಾಕೆ ಹಾಗೆ ಪ್ರಶ್ನಿಸಿದರು ಅನ್ನೋದು ಈಗ ತಿಳಿಯಿತು. ವರಪರೀಕ್ಷೆ"

ಅವನು ಮತ್ತೆ ನಕ್ಕ.

ಆದರೆ ಅವನ ನಗುವ ಮುಖವನ್ನು ನೋಡಿ ಕಣ್ಣರಳಿಸುವ ಕಲ್ಯಾಣಿ ಬಳಿಯಲ್ಲಿರಲಿಲ್ಲ. ತನ್ನ ನಗು ಅವಳಿಗೆಷ್ಟು ಪ್ರಿಯ!

"ನಿಮ್ಮ ಅಭಿಪ್ರಾಯ ತಿಳಿದುಕೊಂಡು ಆಮೇಲೆ ನಿಮ್ಮ ತಂದೆ, ತಾಯೀನ ಬಂದು ಕೇಳೋಣಾಂತಿದೀವಿ"

"ನೋಡೋಣ. ಕಲ್ಯಾಣಿ ಏನು ಹೇಳ್ತಾರೆ?"

ರಾಮನಾಥ ಕುತೂಹಲದಿಂದ ಕೇಳಿದ.

"ನಾವು ಅವಳಿಗೆ ಈ ವಿಷಯ ಹೇಳಿಲ್ಲ. ನಿಮ್ಮ ಅಭಿಪ್ರಾಯ ತಿಳಿದುಕೊಂಡು ಆಮೇಲೆ ಅವಳನ್ನು ಕೇಳೋಣಾಂತ...."

ಅನಂತ ಲೋಕಾಭಿರಾಮವಾಗಿ ಮಾತನಾಡುತ್ತಾ ರಾಮನಾಥ ಇಳಿದುಕೊಂಡಿದ್ದ ಹೋಟಲಿನವರೆಗೆ ಬಂದ.

"ನಾನಿನ್ನೂ ಬರಲಾ, ಬೆಂಗಳೂರಿಗೆ ಹೋಗುವುದರಲ್ಲಿ ಬನ್ನಿ ಇನ್ನೊಂದು ಸಲ"

"ಪ್ರಯತ್ನಿಸುತ್ತೇನೆ"

ರಾಮನಾಥ ಕಣ್ಮರೆಯಾಗುವವರೆಗೆ ಅನಂತ ಅಲ್ಲಿಯೇ ನಿಂತಿದ್ದ. ಅವನ ದೀರ್ಘ ಆಕೃತಿ ಕತ್ತಲಲ್ಲಿ ಕರಗಿದ ನಂತರ ಅನಂತ ಅಲ್ಲಿಂದ ಕಾಲ್ತೆಗೆದ.

ರಾಮನಾಥ ರೂಮಿಗೆ ಹೋಗಿ ಸ್ವಿಚ್ಚು ಒತ್ತಿದ. ಜೇಬಿಗೆ ಕೈಹಾಕಿ ಸಿಗರೇಟನ್ನು ಹೊರಗೆ ತೆಗೆದ. ಅದರೊಡನೆ ಕಲ್ಯಾಣಿ ಕೊಟ್ಟಿದ್ದ ಕಡ್ಡಿ ಪೆಟ್ಟಿಗೆಯೂ ಹೊರಗೆ ಬಂತು.

"ಪೆಟ್ಟಿಗೆ ನಿಮಗಲ್ಲ ವಾಪಸ್ ಕೊಡಬೇಕು" ಎಂದು ಕಲ್ಯಾಣಿ ಮತ್ತೆ ಅವನ ಕಿವಿಯಲ್ಲಿ ಪಿಸುಗುಟ್ಟಿದಂತಾಯಿತು.

ಬಿಚ್ಚಿ ಕುರ್ಚಿಯ ಬೆನ್ನಿಗೆ ತಗುಲಿಹಾಕಿದ್ದ ಕೋಟನ್ನು ತಟ್ಟನೆ ಭುಜಕ್ಕೆ ತಗುಲಿಸಿಕೊಂಡು ರಾಮನಾಥ ರೂಮಿನ ದೀಪ ಆರಿಸಿದ.

"ಛೇ, ನಂಗೇನು ಬಂತು? ಈ ಹೊತ್ತಿನಲ್ಲಿ ಕಡ್ಡಿಪೆಟ್ಟಿಗೆಗಾಗಿ ಕಲ್ಯಾಣಿಯನ್ನು ಹುಡುಕಿಕೊಂಡು ಹೋದರೆ ಏನೆಂದುಕೊಳ್ಳುತ್ತಾರೆ? ಇನ್ನೊಂದು ದಿನ ಅವರ ಮನೆಗೆ ಹೋಗುವುದಕ್ಕೆ ಇದೇ ಪಾಸ್‌ಪೋರ್ಟ್."

ಇನ್ನೊಂದು ದಿನ ತಾನಾದರೂ ಯಾಕೆ ಹೋಗಬೇಕು? ತನಗೇನು ಕೆಲಸ ಅಲ್ಲಿ?

ಅಲ್ಲಿ ತನ್ನನ್ನು ಕೈ ಬೀಸಿ ಕರೆಯುತ್ತಿದ್ದವರಾರು? ಕಲ್ಯಾಣಿಯೇ? ತಾನು ಮನಸ್ಸುಮಾಡಿದರೆ ಕಲ್ಯಾಣಿಯ ಕೈಹಿಡಿಯಬಹುದು. ತನ್ನಲ್ಲಿ ಮಧುರ ಭಾವನೆಗಳನ್ನು ಮೂಡಿಸಿದ್ದ ಈ ಮಾಧುರಿಯೇ ತನ್ನ ಅರ್ಧಾಂಗಿಯಾಗಬಹುದು.

ಮದುವೆ ಎಂದರೆ ಎಷ್ಟು ದೊಡ್ಡ ಜವಾಬ್ದಾರಿ! ಆತುರದಲ್ಲಿ ಮದುವೆ ಮಾಡಿಕೊಳ್ಳುವ ಹಾಗೆ ಇಲ್ಲವೇ ಇಲ್ಲ. ಗಂಡು–ಹೆಣ್ಣು ಕತ್ತಿಗೆ ಹಗ್ಗ ಸೇರಿಸಿ ಬಿಗಿದುಕೊಂಡ ಮೇಲೆ ಮುಗಿಯಿತು–ಸುಖವಾಗಲಿ, ದುಃಖವಾಗಲಿ ಅನುಭವಿಸಬೇಕು. ಅಮೆರಿಕದವರು ಮದುವೆ ಮಾಡಿಕೊಳ್ಳುವುದಕ್ಕೂ ಹಿಂಜರಿಯುವುದಿಲ್ಲ, ಪುನಃ ವಿವಾಹ ವಿಚ್ಛೇದನ ಮಾಡಿಕೊಳ್ಳಲೂ ಹೆದರುವುದಿಲ್ಲ.

ಬೆಳಿಗ್ಗೆ ಭೇಟಿ–ಮಧ್ಯಾಹ್ನ ವಿವಾಹ–ಸಂಜೆಗೆ ಡೈವೋರ್ಸ್.

ಅನಂತ ತನಗೆ ಕಲ್ಯಾಣಿಯನ್ನು ವಿವಾಹವಾಗೆಂದು ಸೂಚಿಸಿದ್ದಾದರೂ ಯಾಕೆ? ಅವಳನ್ನು ಕಂಡರೆ ತನಗೆ ಸ್ವಲ್ಪ ಹೃದಯ ಕರಗುತ್ತಿದ್ದುದೇನೋ ನಿಜ.

ಆದರೆ ಅದು ಅನಂತನಿಗೆ ಗೊತ್ತಾದುದಾದರೂ ಹೇಗೆ? ತಾನು ಅವಳನ್ನು ಆಗಾಗ್ಗೆ ಕೀಟಲೆ ಮಾಡುತ್ತಿದ್ದುದಕ್ಕೇನಾದರೂ ಹಾಗೆ ತಿಳಿದುಕೊಂಡನೋ?

ಕಲ್ಯಾಣಿಯ ಕನಸು ಕಾಣುತ್ತಾ ರಾಮನಾಥ ನಿದ್ದೆಹೋದ. ಮತ್ತೆ ಅನಂತನ ಸಂಸಾರವನ್ನು ಅವನು ವಸ್ತುಪ್ರದರ್ಶನದಲ್ಲಿ ಕಾಣಲಿಲ್ಲ. ಅವನ ಜೇಬಿನಲ್ಲೇನೋ ಕಲ್ಯಾಣಿ ಕೊಟ್ಟಿದ್ದ ಬೆಂಕಿಪೆಟ್ಟಿಗೆ ಇತ್ತು. ಅಕಸ್ಮಾತ್ ಅವರೇನಾದರೂ ಕಂಡರೆ ಕೂಡಲೇ ಕೊಟ್ಟುಬಿಡೋಣವೆಂದು ನಿರ್ಧರಿಸಿದ್ದ ರಾಮನಾಥ.

ಬೆಂಗಳೂರಿಗೆ ಹಿಂತಿರುಗುವ ಹಿಂದಿನ ದಿನ ರಾಮನಾಥ ಕಡ್ಡಿಪೆಟ್ಟಿಗೆ ಕೊಡುವ ನೆಪಮಾಡಿಕೊಂಡು ಅನಂತನ ಮನೆಗೆ ಹೋದ.

ಮನೆಯ ಮುಂಭಾಗದಲ್ಲಿ ಯಾರೂ ಇರಲಿಲ್ಲ. ಮನೆಯೊಳಗೂ ಯಾರೂ ಇದ್ದಂತೆ ತೋರಲಿಲ್ಲ.

ರಾಮನಾಥ ಅನುಮಾನಿಸುತ್ತಾ "ಅನಂತರಾವ್" ಎಂದ.

"ಯಾರೂ" ಎಂದು ಕೇಳುತ್ತಾ ಕಲ್ಯಾಣಿ ಹೊರಗೆ ಬಂದಳು.

"ಅನಂತರಾವ್ ಇಲ್ಲವಾ ?"

"ಇಲ್ಲ. ಅವರೆಲ್ಲಾ ವಾಕಿಂಗ್ ಹೋಗಿದಾರೆ"

"ವೆಂಕಟಾಚಲಯ್ಯನವರು ?"

"ಅವರೂ ಇಲ್ಲ"

"ಯಾರೂ ಇಲ್ಲವೇ ?"

ಕಲ್ಯಾಣಿ ನಗುತ್ತಾ "ಯಾಕೆ ನಾನೊಬ್ಬಳಿದೀನಲ್ಲಾ" ಎಂದಳು.

"ಸರಿ ಹಾಗಾದರೆ ನಾನಿನ್ನು ಬರ್ತೀನಿ" ಎನ್ನುತ್ತಾ ರಾಮನಾಥ ಅವರ ಮನೆಯ ಮೆಟ್ಟಲು ಹತ್ತಿದ.

"ನಿಮ್ಮ ಕಡ್ಡಿಪೆಟ್ಟಿಗೆ ಕೊಡೋಣಾಂತ ಬಂದೆ."

"ಯಾವುದು ?" ಕಲ್ಯಾಣಿಗೆ ಆ ಪ್ರಸಂಗ ಮರೆತುಹೋಗಿತ್ತು.

"ಆವತ್ತು ನೀವು ಕೊಟ್ಟಿದ್ದಿರಲ್ಲಾ ಅದು"

"ಕೊಡಿ. ನನಗೆ ಮರೆತೇಹೋಗಿತ್ತು"

ರಾಮನಾಥ ಜೇಬಿನಿಂದ ಪೆಟ್ಟಿಗೆ ತೆಗೆದು ಅಲ್ಲಿಯೇ ಇದ್ದ ಒಂದು ಕುರ್ಚಿಯ ಮೇಲೆ ಇಟ್ಟ.

"ಆ ಕುರ್ಚಿ ಇರೋದು ಕಡ್ಡಿಪೆಟ್ಟಿಗೆ ಇಡೋದಕ್ಕಲ್ಲ. ತಮ್ಮಂತಹವರು ಕುಳಿತುಕೊಳ್ಳುವುದಕ್ಕೆ."

ಅವಳು ಅಷ್ಟು ಹೇಳಿದ್ದೇ ಸಾಕೆಂದು ರಾಮನಾಥ ಕುರ್ಚಿಯಮೇಲೆ ಕುಳಿತು

"ಇಲ್ಲಿ ಕೂತ್ಕೊಂಡಿದ್ದಕ್ಕೆ ನನಗೇನು ಲಾಭ?" ಎಂದ.

"ಒಂದು ಲೋಟ ಕಾಫಿ" ಎನ್ನುತ್ತಾ ಕಲ್ಯಾಣಿ ಒಳಗೆ ಹೋದಳು. ಎರಡು ನಿಮಿಷಗಳಲ್ಲಿ ಹೊರಗೆ ಬಂದು ವೀಕ್ಲಿಯೊಂದನ್ನು ಅವನ ಕೈಗಿತ್ತು ಮತ್ತೆ ಒಳಗೆ ಹೋದಳು.

ಐದು ನಿಮಿಷಗಳಲ್ಲಿ ಕಲ್ಯಾಣಿ ಹೊಗೆಯಾಡುತ್ತಿದ್ದ ಕಾಫಿಯನ್ನು ತೆಗೆದುಕೊಂಡು ಬಂದಳು.

"ಪರವಾಗಿಲ್ಲ. ತುಂಬಾ ಬೇಗ ಮಾಡಿದಿರಿ?" ರಾಮನಾಥ ತನ್ನ ಮೆಚ್ಚುಗೆ ಸೂಚಿಸಿದ.

"ನನಗೇಂತ ಮಾಡಿಟ್ಟುಕೊಂಡಿದ್ದೆ, ಅಷ್ಟರಲ್ಲಿ ನೀವು ಬಂದಿರಿ. ಮೈಸೂರಿನ ಕೆಲಸ ಮುಗಿಯಿತಾ?"

"ಹೂಂ. ನಾಳೆ ಊರಿಗೆ ಹೊರಡುತ್ತೀನಿ. ನಿಮಗೆಲ್ಲಾ ಹೇಳಿಬಿಟ್ಟು ಹೋಗೋಣವೆಂದು ಬಂದೆ" ಎನ್ನುತ್ತಾ ರಾಮನಾಥ ನೇರವಾಗಿ ಕಲ್ಯಾಣಿಯನ್ನು ದಿಟ್ಟಿಸಿ ನೋಡಿದ.

ಊಹೂಂ. ಅವಳಿಗೆ ತಿಳಿದಿರಲಾರದು. ಅಣ್ಣ ಅವಳ ಮದುವೆಯ ವಿಷಯ ಖಂಡಿತ ಪ್ರಸ್ತಾಪ ಮಾಡಿರಲಾರ. ಇಲ್ಲದಿದ್ದರೆ, ಅವಳು ಇಷ್ಟು ನಿಸ್ಸಂಕೋಚವಾಗಿ ತನ್ನೆದುರಿಗೆ ನಿಲ್ಲುತ್ತಿರಲಿಲ್ಲ.

"ಬೆಂಗಳೂರಿಗೆ ನೀವೆಲ್ಲಾ ಯಾವಾಗ ಬರ್ತೀರಿ?"

"ಅಲ್ಲೇನು ಕೆಲಸ ನಮಗೆ?"

ರಾಮನಾಥ ಅವಳನ್ನು ಪರೀಕ್ಷಿಸಬೇಕೆಂದು ಕೇಳಿದ.

"ಸಧ್ಯದಲ್ಲೇ ತಾವು ಮದುವೆಯ ಊಟ ಹಾಕಿಸುತ್ತೀರೆಂದು ಕೇಳಿದೆ. ನಿಜವೇ?"

"ಇಲ್ಲ."

"ಹಾಗಂತ ಕೇಳಿದೆ. ಹಾಗೂ ವರ ಯಾರು ಅನ್ನೋದು ನನಗೆ ಸುಮಾರಾಗಿ ಗೊತ್ತಾಗಿದೆ."

"ಹೌದೇನು? ನನಗೇ ಈ ಸಮಾಚಾರ ಹೊಸದು."

'ಯಾರು ವರ' ಎಂದವಳು ಕೇಳಲಿಲ್ಲವಲ್ಲ ಎಂದು ರಾಮನಾಥನಿಗೆ ಕಸಿವಿಸಿಯಾಯಿತು.

"ವರನಿಗೂ ಒಳ್ಳೆಯ ಕೆಲಸವಿದೆಯಂತೆ"

"ಬಹಳ ಸಂತೋಷ"

"ಅವನ ಹೆಸರೇನು ತಮಗೆ ಗೊತ್ತೆ ?"

"ನನ್ನ ಮದುವೆಯ ವಿಷಯ ನನಗಿಂತಲೂ ನಿಮಗೇ ಹೆಚ್ಚು ಗೊತ್ತಿದೆ. ಆದುದರಿಂದ ಎಲ್ಲವನ್ನೂ ನೀವೇ ಹೇಳಿಬಿಡಿ"

"ಕಲ್ಯಾಣಿ, ನೀವು ಕಪಟಿಗಳು"

"ಕ್ಷಮಿಸಿ, ಆ ಆಪಾದನೆಯನ್ನು ಹೊರಲು ನಾನು ತಯಾರಿಲ್ಲ"

"ಹೋಗಲಿ. ನಿಮ್ಮಣ್ಣ ನನ್ನ ಒಂದು ಪ್ರಶ್ನೆ ಕೇಳಿದಾರೆ...." ಎನ್ನುತ್ತಾ ರಾಮನಾಥ ಅವಳ ಕಡೆ ನೋಡಿದ.

ಅವಳ ಕೆನ್ನೆಯಲ್ಲಿ ಕೆಂಪು ಸುಳಿದಂತಾಯಿತು.

ಅಥವಾ ಅದು ತನ್ನ ಭ್ರಮೆಯೋ?

"ಸರಿ"

"ಆ ಪ್ರಶ್ನೆ ಏನು ಗೊತ್ತೆ?"

"..... .........."

"ಕಲ್ಯಾಣಿಯನ್ನು ನೀವು ಮದುವೆಯಾಗುತ್ತೀರಾ ಎಂದು ಕೇಳಿದಾರೆ"

"ನೀವೇನು ಹೇಳಿದಿರಿ ?" ಕಲ್ಯಾಣಿಯ ಸಾಹಸದ ಪ್ರಶ್ನೆ ಅದು.

"ಏನು ಹೇಳಲಿ?" ರಾಮನಾಥ ಅವಳನ್ನೇ ಕೇಳಿದ.

ಕಲ್ಯಾಣಿ ಬಲವಂತದಿಂದ ನಕ್ಕು........

"ಚೆನ್ನಾಗಿದೆ ನಿಮ್ಮ ಪ್ರಶ್ನೆ. ನಾನು ಏನು ಹೇಳಿಕೊಟ್ಟರೆ ಅದನ್ನು ಹೇಳ್ತೀರಾ?" ಎಂದಳು

"ಹೂಂ"

"ಮಾಡಿಕೊಳ್ಳಲ್ಲ ಎಂದು ಹೇಳಿ"

"ಯಾಕೆ ?"

"ಯಾಕೇಂತ ಕೇಳಬಾರದು."

"ಕಾರಣ ಏನು ಏಳಲಿ ?"

"ಏನಾದರೂ ಹೇಳಿ"

"ನೀವು ಹೇಳಿಕೊಟ್ಟ ಹಾಗೆ ನಾನು ಹೇಳೋದಿಲ್ಲ" ಎಂದು ರಾಮನಾಥ.

ಅವನ ಮಾತು ಮುಗಿಯುವಷ್ಟರಲ್ಲಿ ಕಲ್ಯಾಣಿ ಅಲ್ಲಿಂದ ಮಾಯವಾದಳು. ರಾಮನಾಥ ಮತ್ತೆ ವೀಕ್ಲಿಯ ಹಾಳೆಯನ್ನು ತಿರುವಿಹಾಕಿದ. ಐದು ನಿಮಿಷ ಕಳೆಯುವಷ್ಟರಲ್ಲಿ ವೆಂಕಟಾಚಲಯ್ಯನವರು ತಮ್ಮ ಸಂಜೆಯ ವಾಕಿಂಗ್ ಮುಗಿಸಿಕೊಂಡು ಹಿಂತಿರುಗಿದರು.

"ಒಬ್ಬರೇ ಕೂತಿದೀರೇನು ? ಕಲ್ಯಾಣಿ ಎಲ್ಲಿ ಹೋದಳು? ಹಗಲೆಲ್ಲಾ ತಿರುಗಾಡ್ತಾಳೆ. ಸಂಜೆ ಮನೆ ಕಾವಲಿಗೆ ಇರೂಂತ ಹೇಳಿ ಹೋದರೆ.... ಕಲ್ಯಾಣೀ.... ಏ ಕಲ್ಯಾಣೀ"

"ಏನಪ್ಪಾ ?"

ಕಲ್ಯಾಣಿ ಒಳಬಾಗಿಲಿನಲ್ಲಿ ನಿಂತೇ ಕೇಳಿದಳು.

"ರಾಮನಾಥ ಬಂದಿದಾರೆ. ಒಂದು ಲೋಟ ಕಾಫಿ...."

"ಆಯ್ತು" ಎಂದ ರಾಮನಾಥ ಆತುರದಿಂದ.

"ಆದರೆ ಆಗಲಿ. ಈಗ ಇನ್ನೊಂದು ಲೋಟ ತಗೊಳ್ಳಿ, ನಿಮ್ಮ ಜೊತೆ ನನಗೂ ಸಿಕ್ಕತ್ತೆ."

ಅನಂತ ಬರುವವರೆಗೂ ರಾಮನಾಥ ಕುಳಿತೇ ಇದ್ದ. ಅನಂತ ಬಂದ ಮೇಲೆ ರಾಮನಾಥನನ್ನು ಊಟಕ್ಕೇಳುವಂತೆ ಒತ್ತಾಯ ಮಾಡಿದ. ಆದರೆ ರಾಮನಾಥ ಒಪ್ಪಲಿಲ್ಲ. ಅನಂತನೊಡನೆ ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತನಾಡಿ ರಾಮನಾಥ ಹೊರಡಲು ಎದ್ದ. ಅನಂತ ಅವನೊಡನೆ

ಸ್ವಲ್ಪ ದೂರ ಹೋಗಲು ಜೊತೆಯಲ್ಲಿ ಬಂದ.

"ನಾನು ನಾಳೆ ಊರಿಗೆ ಹೋಗ್ತೀನಿ. ಇಲ್ಲಿಯ ಕೆಲಸವಾಯಿತು"

ಅನಂತನಿಗೆ ಕಲ್ಯಾಣಿಯ ಮದುವೆಯ ಬಗ್ಗೆ ಕೇಳುವ ತವಕ ವಾಯಿತು. ಆದರೆ ರಾಮನಾಥ ಎಲ್ಲಿ ಅಪಾರ್ಥ ಮಾಡಿಕೊಳ್ಳುವನೋ ಎಂಬ ಸಂಕೋಚವೊಂದು ಕಡೆ, ಇದೇನು ಹೀಗೆ ಅವಾಂತರ ಮಾಡ್ತಿದಾನೆ ತಂಗೀನ ಗಂಟು ಹಾಕೋಕೆ ಎಂದುಕೊಂಡರೆ, ಎಂಬ ಆತಂಕವೊಂದು ಕಡೆ ಇವೆ ರಡೂ ಅನಂತನ ಬಾಯನ್ನು ಕಟ್ಟಿಹಾಕಿದವು.

ಅನಂತ ಯಾಕೆ ಮದುವೆಯ ಸುದ್ದಿ ಎತ್ತಲಿಲ್ಲ ಎಂದು ರಾಮನಾಥ ಯೋಚಿಸುತ್ತಿದ್ದ. ತಾನಾಗಿಯೇ ಬಾಯಿಬಿಟ್ಟು ಹೇಳಿ ತನ್ನ ಆತುರವನ್ನು ಪ್ರದರ್ಶಿಸುವುದು ಚೆನ್ನಾಗಿರುವುದಿಲ್ಲ ಎಂದು ಭಾವಿಸಿ ರಾಮನಾಥನೂ ಸುಮ್ಮ ನಿದ್ದ.

ಕೊನೆಗೆ ಅನಂತನೇ ಹಿಂಜರಿಯುತ್ತಾ ಕೇಳಿದ.

"ಅವತ್ತು ನಾನೊಂದು ವಿಷಯ ತಮಗೆ ಹೇಳಿದ್ದೆ...."

"ಯಾವುದು ?"

"ಅದೇ ನಮ್ಮ ಕಲ್ಯಾಣಿಯ ವಿಷಯ"

"ಸರಿ"

"ನೀವೇನು ಯೋಚನೆ ಮಾಡಿದೀರಿ?"

"ನನಗೇನೋ ಹುಡುಗಿ ಎಲ್ಲ ವಿಧದಲ್ಲಿಯೂ ಒಪ್ಪಿಗೆಯಾಗಿದಾಳೆ. ಆದರೆ...."

"ಆದರೆ ಏನು ?"

"ನಮ್ಮ ತಂದೆ, ತಾಯಿ ಒಪ್ಪಬೇಕು. ಅವರ ಒಪ್ಪಿಗೆಯೂ ನನಗೆ ಮುಖ್ಯ"

"ನಮಗೂ ಹಿರಿಯರ ಒಪ್ಪಿಗೆ ಮುಖ್ಯ. ನೀವು ಸಮ್ಮತಿಸಿದರೆ ನಾವು ಬಂದು ಅವರನ್ನು ಕಾಣುತ್ತೇವೆ."

"ಆಗಲಿ, ಯಾವುದಕ್ಕೂ ನಾನು ಬರೆಯುತ್ತೇನೆ."

"ಹುಂ, ಶುಭಕಾರ್ಯ ಆದಷ್ಟು ಬೇಗ ನಡೆಸಿಬಿಡುವುದು ಕ್ಷೇಮ" ಎಂದು ಅನಂತ ಅಲ್ಲಿಗೆ ಮದುವೆಯ ವಿಷಯವನ್ನು ನಿಲ್ಲಿಸಿದ.

ಅಂದಿನಿಂದ ಅನಂತನಿಗೆ ರಾಮನಾಥನ ಕಾಗದವನ್ನು ಕಾಯುವುದೇ ಒಂದು ಕೆಲಸವಾಯಿತು. ಒಂದೆರಡು ತಿಂಗಳುಗಳಾದರೂ ಅವನಿಂದ ಕಾಗದ ಬರಲಿಲ್ಲ. ಕೊನೆಗೆ ಅನಂತ ಮನಸ್ಸಿನಲ್ಲಿಯೇ ಹೇಳಿಕೊಂಡ.

"ರಾಮನಾಥ ಬರಿಯ ಮಾತುಗಾರ."

ಆದರೆ ಅವನು ಹಾಗೆ ಹೇಳಿಕೊಂಡ ಮಾರನೆಯ ದಿನವೇ ರಾಮ ನಾಥನಿಂದ ಕಾಗದ ಬಂತು.

ಅವನ ಸಲಹೆಯ ಮೇರೆಗೆ ಅನಂತ, ವೆಂಕಟಾಚಲಯ್ಯ, ವಿಜಯಮ್ಮ, ಆನಂದ ಬೆಂಗಳೂರಿಗೆ ಹೊರಟರು.

ರಾಮನಾಥನ ಮದುವೆ ನಿಶ್ಚಯವಾಯಿತು.

ಮದುವೆ ನಿಶ್ಚಯವಾದಾಗಿನಿಂದ ರಾಮನಾಥ ಹಗಲುಗನಸನ್ನು ಕಾಣ ತೊಡಗಿದ.

ಆಫೀಸಿನಲ್ಲಿ, ಮನೆಯಲ್ಲಿ, ಗೆಳೆಯರ ನಡುವೆ, ಎಚ್ಚರವಾಗಿ ಇರುವಾಗ, ನಿದ್ದೆಯಲ್ಲಿ ರಾಮನಾಥನಿಗೆ ಕಲ್ಯಾಣಿಯದೇ ನೆನಪು. ತಮ್ಮ ಭವಿಷ್ಯ ವನ್ನು ಕುರಿತು ರಂಗುರಂಗಿನ ಕನಸು ಹೆಣೆಯುವುದರಲ್ಲಿಯೇ ದಿನದ ಬಹು ಭಾಗ ಕಳೆದುಹೋಗುತ್ತಿತ್ತು.

ದಿನ ದಿನಕ್ಕೆ ಅನ್ಯಮನಸ್ಕತೆ ಹೆಚ್ಚಾಯಿತು.

ತಾವಿಬ್ಬರೂ ಮುಂದೆ ಹೇಗಿರಬೇಕು? ಎಲ್ಲ ಗಂಡಹೆಂಡಿರಂತೆ ಖಂಡಿತ ತಾವಿರಬಾರದು. ಎಲ್ಲರಂತೆಯೇ ತಾವೂ ಇದ್ದರೆ ತಮಗೂ, ಇತರ ರಿಗೂ ಅಲ್ಲಿಗೆ ಏನು ವ್ಯತ್ಯಾಸ? ತಾವೂ ಎಲ್ಲರಂತಾಯಿತಲ್ಲ. ತಾವಿಬ್ಬರೂ ಇತರರ ಕಣ್ಣಿನಲ್ಲಿ ಆದರ್ಶ ಜೋಡಿ ಎನಿಸಿಕೊಳ್ಳಬೇಕು. ಇತರರು ತಮ್ಮನ್ನು ನೋಡಿ ಅಸೂಯೆ ಪಟ್ಟುಕೊಳ್ಳುವಂತಿರಬೇಕು. ತಮ್ಮ ಆದರ್ಶವನ್ನು ಇತರ ದಂಪತಿಗಳೂ ಅನುಸರಿಸುವಂತೆ ತಾವು ಬಾಳಬೇಕು.

ತಮ್ಮಿಬ್ಬರ ನಡುವೆ ಯಾವ ಬಗೆಯ ಭಿನ್ನಾಭಿಪ್ರಾಯವೂ ಬರ ಬಾರದು. ಕಲ್ಯಾಣಿಯಲ್ಲಿ ತಾನು, ಕಲ್ಯಾಣಿ ತನ್ನಲ್ಲಿ ಐಕ್ಯವಾಗಬೇಕು.

ಇದು ಸಮಾನತೆಗಾಗಿ ಹೊಡೆದಾಡುವ ಯುಗ. ಕಲ್ಯಾಣಿಗೆ ಪೂರ್ಣ ಸ್ವಾತಂತ್ರ್ಯವನ್ನು ತಾನು ಕೊಡಬೇಕು. ತಾವಿಬ್ಬರೂ ಯಾವಾಗಲೂ ಪರ ಸ್ಪರ ಅನ್ಯೋನ್ಯತೆಯಿಂದಿರಬೇಕು.

ಒಂದು ದಿನವೂ ಜಗಳ, ಚರ್ಚೆ ಯಾವುದಕ್ಕೂ ಅವಕಾಶ ಕೊಡ ಬಾರದು.

ದಾಂಪತ್ಯ ಜೀವನವೆಂದರೆ ಒಂದು ಸೊಗಸಾದ ಅಮೃತಶಿಲೆಯ ಮಹಲು. ಅಲ್ಲಿಯ ರಾಜ ತಾನು, ರಾಣಿ ಕಲ್ಯಾಣಿ. ಯಾವಾಗಲೂ ಪ್ರೇಮಗೀತೆಗಳನ್ನು ಹಾಡುತ್ತಾ ಪ್ರಣಯ ಸರೋವರದಲ್ಲಿ ಮೀಯುವ ಜೋಡಿ ಹಂಸಪಕ್ಷಿಗಳಂತೆ ತಾವಿರಬೇಕು.

ಓಹ್ ! ಬದುಕು ಎಷ್ಟು ಸುಂದರ !

ಕೆಲವರು ಸಂಸಾರ, ಬದುಕು ಎಂದರೆ ಯಾಕೆ ಹಾಗೆ ಬೆದರುತ್ತಾರೋ ಆ ಪರಮಾತ್ಮನೇ ಬಲ್ಲ.

ಆದರೆ ಎಲ್ಲರಿಗೂ ಕಲ್ಯಾಣಿಯಂತಹ ಹೆಂಡತಿ ಸಿಕ್ಕಬೇಕಲ್ಲ ?

ರಾಮನಾಥ ಕಲ್ಯಾಣಿಯ ಮುಖವನ್ನು ನೆನೆದುಕೊಂಡ.

ಏನು ಆಕರ್ಷಣೆ ಅವಳ ಮುಖದಲ್ಲಿ !

ಸುರಸುಂದರಿಯಲ್ಲ. ನಿಜ. ಆದರೂ ಆ ದಿನ ಬಸ್ಸಿನಲ್ಲಿ ನೋಡಿದ ಗಳಿಗೆಯಿಂದಲೇ ತನ್ನ ಹೃದಯವನ್ನು ಸೂರೆಗೊಂಡಳಲ್ಲ! ಅವಳು ತನ್ನ ಮೇಲೆ ಬೀರಿದ ಸಮ್ಮೋಹನಾಸ್ತ್ರವಾದರೂ ಎಂತಹದು !

ಮಾಟಗಾತಿ ಕಲ್ಯಾಣಿ.

ಆದರೆ....ಆದರೆ....ಅಮ್ಮನಿಗೆ ಅದೇಕೋ ಅವಳು ಅಷ್ಟು ಹಿಡಿಸಿದಂತಿರಲಿಲ್ಲ. ಕಲ್ಯಾಣಿಯನ್ನು ನೋಡಿ ಆಕೆ ನಿರಾಸೆಯ ನಗೆ ನಕ್ಕು,

"ರಾಮೂ,ಬಯಸಿ ಈ ಹುಡುಗೀನ ಮೆಚ್ಚಿದೆಯಲ್ಲೋ ? ಎಂತೆಂತಹ ಹುಡುಗಿಯರನ್ನೋ ಬೇಡಾಂದೆ. ಹುಂ, ಅವಳೇ ನಿನ್ನ ಹೆಂಡತಿಯಾಗಿದ್ದರೆ ಮೆಚ್ಚದೇ ಏನು ಮಾಡೀಯ. ಮುಖ್ಯ, ನಿನಗೊಪ್ಪಿಗೆಯಾದರೆ ಸರಿ. ನೀವು ಗಂಡ ಹೆಂಡತಿ ಸಂತೋಷವಾಗಿರೋದು ನಮಗೆ ಬೇಕು" ಎಂದಿದ್ದರು.

ತಾವು ಸಂತೋಷವಾಗಿರುವುದೇ ?

ತಮ್ಮನ್ನು ನೋಡಿ ಸಂತೋಷ-ಪಡುವುದನ್ನು ಕಲಿಯ ಬೇಕು ಇತರರು.

ತಾಯಿಯ ದೃಷ್ಟಿ ಮಗನ ಸುಖ, ಸೌಕರ್ಯದ ಕಡೆಗಿತ್ತು.

ಆದರೆ ತಂದೆಯ ದೃಷ್ಟಿ?

"ನೀವು ಸೊಗಸಾಗಿ ವರೋಪಚಾರಮಾಡಿ, ಹುಡುಗೀಗೆ ಮೈತುಂಬಾ ಒಡವೆ ಇಡಬೇಕು" ಎಂದಾತ ವೆಂಕಟಾಚಲಯ್ಯನವರಿಗೆ ಖಂಡಿತವಾಗಿ ಹೇಳಿದ್ದರು.

ತಂದೆಯ ದೃಷ್ಟಿ ವರೋಪಚಾರದ ಕಡೆಗಿತ್ತು.

ತನ್ನ ಗಮನ ಕಲ್ಯಾಣಿಯತ್ತ.

ಕಲ್ಯಾಣಿಯ ಗಮನ ತನ್ನ ಕಡೆಗೆ.

ತಾಯಿ, ತಂದೆಗೆ ಮತ್ತೂ ಒಂದು ಅಸಮಾಧಾನ. ಹಿರಿಯರಾದ ತಾವು ಇದ್ದಾಗಲೂ ಮೊದಲು ಹುಡುಗನನ್ನು ಹೆಣ್ಣಿನವರು ಒಲಿಸಿ ಕೊಂಡಿದ್ದು ಅವರಿಗೆ ಅಷ್ಟು ಹಿಡಿಸಿರಲಿಲ್ಲ.

ಯಾವುದಕ್ಕೂ ಬೇಗ ಒಗ್ಗಿಕೊಂಡು ಹೋಗುವ ಸ್ವಭಾವದ ಸಾತಮ್ಮ 'ಕಾಲ ಬದಲಾಯಿಸಿತು' ಎಂದುಕೊಂಡರು. ಆದರೂ ಆಕೆಗೆ ಮಗ ಮೆಚ್ಚಿಕೊಂಡಿದ್ದ ಹುಡುಗಿಯ ಮೇಲೆ ಒಂದು ರೀತಿಯ ಅಭಿಮಾನವೇ ಇತ್ತು. ಮಗನಿಗೆ ಪ್ರಿಯವಾದವಳು ಅವನ ತಾಯಿಗೂ ಪ್ರಿಯವಾಗಿದ್ದಳು.

ಶೇಷಯ್ಯನವರಿಗೆ ಮಗನಿಗೆ ಮದುವೆಯಾಗಿ ಸೊಸೆ ಮನೆಗೆ ಬರುತ್ತಾಳೆ ಎಂಬ ಸಂತೋಷಕ್ಕಿಂತಲೂ ಮಗನ ಮದುವೆಗೆ ಹಣ ಖರ್ಚುಮಾಡಬೇಕಲ್ಲಾ ಎಂಬ ವ್ಯಥೆಯೇ ಹೆಚ್ಚಾಗಿತ್ತು.

ಇರುವವನೊಬ್ಬ ಮಗನ ಮದುವೆಯನ್ನು ಅಚ್ಚುಕಟ್ಟಾಗಿ, ವೈಭವದಿಂದ ಮಾಡುವ ಆಸೆ ಸಾತಮ್ಮನಿಗೆ.

ಕರಿಮಣಿ, ತಾಳಿ ಇದ್ದರೆ ಸಾಕು—ಮದುವೆಯನ್ನು ಮಾಡಿ ಹೊರ ಇಳಿಸಿಕೊಂಡರೆ ಸಾಕು ಎಂದು ಶೇಷಯ್ಯನ ಅಭಿಪ್ರಾಯ.

ಗಂಡನ ಈ ಬಗೆಯ ಧೋರಣೆ ಸಾತಮ್ಮನಿಗೆ ಹಿಡಿಸಲಿಲ್ಲ. ದೇವರು ಯಾವುದಕ್ಕೂ ಕಡಿಮೆ ಮಾಡಿಲ್ಲದಿರುವಾಗ ಈ ಜಿಪುಣತನ ಯಾಕೆ ಎಂದು ಆಕೆ ಕೊರಗಿದರು.

ಒಮ್ಮೆ ಮಗ ಪ್ರಸನ್ನನಾಗಿರುವಾಗ ಸಾತಮ್ಮ ತಮ್ಮ ಮನದ ಅಳಲನ್ನು ತೋಡಿಕೊಂಡರು.

"ಬಿಚ್ಚೋಲೆ ಗೌರಮ್ಮನ ಹಾಗೆ ಸೊಸೇನ ಬರಮಾಡಿಕೊಳ್ಳೋ

ಣಾಂತಿದಾರಲ್ಲೋ ರಾಮು? ನೀನಾದರೂ ಅವರಿಗೆ ವಿವೇಕ ಹೇಳಪ್ಪ" ಎಂದಾಗ ಅವನು

"ಬಿಡಮ್ಮ. ಒಡವೆಗಳೇ ಮನುಷ್ಯನಿಗೆ ಮುಖ್ಯವಲ್ಲ. ನಿಧಾನವಾಗಿ ಮಾಡಿಸಿದರಾಯಿತು" ಎಂದುಬಿಟ್ಟ.

"ಮಾಡುವ ಕಾಲಕ್ಕೆ ಎಲ್ಲಾನೂ ಅಣಿಯಾಗಿ ಮಾಡಬೇಡವೆ? ಮುಂದೆ ಮಾಡ್ತೀವಿ ಅನ್ನೋದು ಸುಳ್ಳು".

"ನಿನಗೆ ಸೊಸೆ ಬರೋದು ಮುಖ್ಯವೋ, ಒಡವೆ ಮುಖ್ಯವೋ?"

"ಎರಡೂ ಮುಖ್ಯ."

ತಾಯಿಯ ಮಾತನ್ನು ತೆಗೆದು ಹಾಕಲಾರದೆ ರಾಮನಾಥ ತನ್ನ ಸಂಪಾದನೆಯ ಹಣದಲ್ಲಿ ಒಂದೆರಡು ಒಡವೆಗಳನ್ನು ಮಾಡಿಸಿ ತಂದು ತಾಯಿಯನ್ನು ಸಮಾಧಾನಗೊಳಿಸಿದ. ತಂದೆಯ ಜೀನತನವನ್ನು ಚೆನ್ನಾಗಿ ತಿಳಿದಿದ್ದ ರಾಮನಾಥ ಹಣ ಖರ್ಚು' ಮಾಡುವ ವಿಷಯದಲ್ಲಿ ತಂದೆಯನ್ನು ಕೆದಕುವುದರಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದುಕೊಂಡಿದ್ದ.

ಶೇಷಯ್ಯನವರೇನೋ 'ವೃಥಾ ಖರ್ಚು'ಎಂದು ಹೇಳುತ್ತಾ ಎಷ್ಟೋ ಖರ್ಚು ಕಡಿಮೆ ಮಾಡಿದರೂ ಒಮ್ಮೊಮ್ಮೆ ಹೆಂಡತಿಯ ಹಟಕ್ಕೆ ತಲೆಬಾಗ ಬೇಕಾಗುತ್ತಿತ್ತು.

ರಾಮನಾಥನ ಮದುವೆ ಹತ್ತಿರ ಬಂತು. ಶೇಷಯ್ಯನವರು ತಮ್ಮ ಖರ್ಚಿನಲ್ಲಿ ಮಾಡಿಧ ದೇವರ ಸಮಾರಾಧನೆ ಊಟಕ್ಕೆ ಹೆಚ್ಚಿಗೆ ಯಾರನ್ನು ಕರೆಯದಿದ್ದರೂ, ಬೀಗರ ಖರ್ಚಿನಲ್ಲಿ ನಡೆಯಲಿರುವ ಮದುವೆಗೇನೋ ಧಾರಾಳವಾಗಿ ನೆಂಟರನ್ನು ಹೊರಡಿಸಿದರು. ಆಗ ಮಾತ್ರ ಕಾಣದ, ಕೇಳದ ನೆಂಟರನ್ನೆಲ್ಲಾ ಹುಡುಕಿಕೊಂಡು ಹೋಗಿ,

"ನಮಗಿರೋನು ಒಬ್ಬ ಮಗ. ಅವನಿಗೆ ಮಾಡೋದು ಒಂದು ಮದುವೆ. ನೀವೆಲ್ಲಾ ಬರಲೇಬೇಕು" ಎಂದು ಉದಾರ ಮನಸ್ಸಿನಿಂದ ಕರೆದು ಬಂದಿದ್ದರು.

ತನ್ನ ಮದುವೆಗೆ ಹೊರಟಿದ್ದ ಜನರ ಗುಂಪನ್ನು ನೋಡಿ ರಾಮನಾಥ ನಿಗೆ ಅಚ್ಚರಿಯಾಯಿತು. ಅವನು ತಾಯಿಯ ಕಿವಿಯಲ್ಲಿ ಮೆಲ್ಲನೆ ಪಿಸು ಗುಟ್ಟಿದ.

"ನಮಗೆ ಇಷ್ಟೊಂದು ನೆಂಟರಿದಾರೇಂತ ಇವತ್ತಿನವರೆಗೆ ಗೊತ್ತೇ ಇರಲಿಲ್ಲಾಮ್ಮ."

ಆಕೆ ವಿಷಾದದಿಂದ ನಕ್ಕರು.

ಮಗನ ಮದುವೆಯಲ್ಲಿಯೂ ಗಂಡ ಒಂದು ಹೊಸ ಸೀರೆ ತೆಗೆದು ಕೊಡದಿದ್ದುದು ಆಕೆಯ ಮನಸ್ಸನ್ನು ಕೊರೆಯುತ್ತಿತ್ತು.

"ಮದುವೆ ಹುಡುಗಿ. ಅವಳಿಗೆ ಒಂದು ಸೀರೆ ತರಬೇಕಾದುದು ನ್ಯಾಯ. ನಿನಗ್ಯಾಕೆ ಸೀರೆ? ಇರೋ ಸೀರೇನೇ ಉಡು ಸಾಕು" ಎಂದು ಅವರು ಜಬರಿಸಿ ಹೆಂಡತಿಗೆ ಹೇಳಿದ್ದರು.

ಮಗನ ಮದುವೆಯಲ್ಲಿ ಗೇಣಗಲ ಅಂಚಿನ ಜರತಾರಿ ಸೀರೆ ಉಟ್ಟು 'ನಮ್ಮ ಯಜಮಾನರು ತೆಗೆದುಕೊಟ್ಟ ಸೀರೆ' ಎಂದು ಹೇಳಿ ಸರೀಕರಲ್ಲಿ ಓಡಾಡಬೇಕೆನ್ನುವ ಚಪಲ ತಾಯಿಗಿತ್ತು.

ತಾಯಿಗಾಗಿ ಮಗನೇ ಸೀರೆಯೊಂದನ್ನು ತಂದ. ಕಲ್ಯಾಣಿಗಾಗಿ ತಂದೆ ಒಂದು ಸಾಮಾನ್ಯ ಸೀರೆಯನ್ನು ತಂದಿದ್ದರು. ಆದರೆ ರಾಮನಾಥ ತನ್ನ ಸಂಪಾದನೆಯ ಹಣದಲ್ಲಿ ಕಲ್ಯಾಣಿಯ ಬಣ್ಣ, ನಿಲುವಿಗೆ ಹೊಂದುವ ನಾಲಕ್ಕಾರು ಸೀರೆಗಳನ್ನು ಆರಿಸಿ ತಂದ. ಮಗ ತಂದ ಸೀರೆಯ ಗಂಟನ್ನು ನೋಡಿ ಶೇಷಯ್ಯ ಹುಬ್ಬು ಗಂಟಿಕ್ಕಿ,

"ಅನ್ಯಾಯವಾಗಿ ಹಣ ವ್ಯರ್ಥವಾಯಿತು. ಯಾರಿಗಾದರೂ ಸಾಲ ಕೊಟ್ಟಿದ್ದರೆ ಬಡ್ಡಿ ಬರುತ್ತಿತ್ತು" ಎಂದರು.

ಗಂಡನ ಮಾತುಕೇಳಿ ಸಾತಮ್ಮನಿಗೆ ರೇಗಿತು. ಎಂದೂ ಪತಿಗೆ ಎದಿರಾಡದ ಆ ಸಾಧ್ವಿ,

"ಹೌದು. ನಾವು ಊಟ ಮಾಡುವ ಖರ್ಚನ್ನೂ ಮಿಗಿಸಿ ಸಾಲಕ್ಕೆ ಕೊಡಬಹುದು. ಗಾಳಿ, ನೀರಿಗಿಂತಲೂ ಮನುಷ್ಯನಿಗೆ ಬೇರೆ ಏನು ಆಹಾರ ಬೇಕಾಗಿದೆ?" ಎಂದರು.

"ಪ್ರಾಣಾಧಾರಕ್ಕೆ ಎಷ್ಟು ಬೇಕೋ ಅಷ್ಟು ಮನುಷ್ಯನಿಗೆ ಸಾಕು. ತುಪ್ಪ, ಹಾಲು, ತರಕಾರಿ, ಮೊಸರು....ಎಲ್ಲಾ ಅನಾವಶ್ಯಕ" ಎಂದವರು ಹೇಳಿ ಮುಗಿಸುವಷ್ಟರಲ್ಲಿ,

"ಒಂದು ದಿನ ಅಚ್ಚುಕಟ್ಟಾಗಿ ತಿಂಡಿ ಇಲ್ಲದಿದ್ದರೆ ಯಾಕೆ ಹಾರಾ

ಡ್ತೀರಿ? ದಿನಕ್ಕೆರಡು ಬಗೆ ತರಕಾರಿ ಇಲ್ಲದಿದ್ದರೆ ಅವತ್ತೆಲ್ಲಾ ಉರಿಸಿಂಗಿ ಹಾಗೆ ಯಾಕೆ ಹಾರಾಡ್ತೀರಿ? ಒಂದು ಹೊತ್ತು ಅನ್ನ, ಸಾರು ಮಾಡಿ ಇಡ್ತೀನಿ' ಮೂರು ಹೊತ್ತು ತಿನ್ನಿ" ಎಂದರು ಸಾತಮ್ಮ.

"ಮೊದಲಿನಿಂದ ನೀನು ಅಚ್ಚುಕಟ್ಟಾಗಿ ಮಾಡಿ ಹಾಕಿ ಅಭ್ಯಾಸ ಮಾಡಿಬಿಟ್ಟಿದೀಯ. ಅದೂ ನಿನ್ನ ತಪ್ಪೆ" ಎಂದು ಶೇಷಯ್ಯ ತಮ್ಮ ನಾಲಿಗೆ ಚಪಲದ ಅಪರಾಧವನ್ನು ಸಾತಮ್ಮನ ಮೇಲೆ ಹೇರಿ ನಿಶ್ಚಿಂತರಾದರು. ತಾಯಿ, ತಂದೆಯ ಬಿಸಿಬಿಸಿಯಾದ ಮಾತುಕತೆಯ ನಡುವೆ ಕುಳಿತು ರಾಮನಾಥ ಕಲ್ಯಾಣಿಯನ್ನು ನೆನೆದು ಮನಸ್ಸನ್ನು ತಂಪು ಮಾಡಿಕೊಂಡ.

ತಾನು, ಕಲ್ಯಾಣಿ ಒಂದು ದಿನವೂ ಹೀಗೆ ಜಗಳವಾಡಬಾರದು. ಅವಳ ಮಾತು ತನಗೆ ವೇದವಾಕ್ಯ. ತನ್ನ ಮಾತು ಅವಳಿಗೆ ವೇದವಾಕ್ಯ....

ಅವಳನ್ನು ನೆನೆಯುತ್ತಿದ್ದಂತೆಯೇ ರಾಮನಾಥನ ಮನಸ್ಸು ತುಂಬಾ ಮೃದುವಾಯಿತು. ಅವಳನ್ನು ಬಿಟ್ಟು ಒಂದು ನಿಮಿಷ ಸಹಿತ ಬದುಕಿರಲು ಸಾಧ್ಯವಿಲ್ಲವೆನಿಸಿತು.

ಕಲ್ಯಾಣಿ ತನ್ನ ಜೀವನವನ್ನು ಬೆಳಗದಿದ್ದರೆ ತಾನು ಸಾಯುವುದು ಖಂಡಿತವೆಂದು ರಾಮನಾಥ ನಂಬಿದ್ದ. ಇಷ್ಟುದಿನ ಅವಳಿಲ್ಲದೆ ತಾನು ದಿನ ಸವೆದಿದ್ದಾದರೂ ಹೇಗೆ?

ಕಲ್ಯಾಣಿ ಒಂದು ಪಕ್ಷ ತನ್ನ ಕಣ್ಣಿಗೆ ಬೀಳದಿದ್ದರೆ ತನ್ನಗತಿ ಏನಾಗ ಬೇಕಿತ್ತು? ಆಗ ತಾನು ಯಾವ ಕೆಟ್ಟ ಮುಖದವಳ ಕೈ ಹಿಡಿಯಬೇಕಿತ್ತೋ?

ಕಲ್ಯಾಣಿಯನ್ನು ತನ್ನ ಕಣ್ಣಿಗೆ ಬೀಳಿಸಿದ ಭಗವಂತನಿಗೆ ತಾನೆಷ್ಟು ಧನ್ಯವಾದಗಳನ್ನು ಅರ್ಪಿಸಿದರೂ ಸಾಲದು.

ಮದುವೆಯಾಗುವವರೆಗೂ ರಾಮನಾಥನಿಗೆ ಕಲ್ಯಾಣಿ ಎಲ್ಲಿ ತನ್ನ ಕೈ ತಪ್ಪಿಹೋಗುವಳೋ ಎಂಬ ಅಂಜಿಕೆ ಇತ್ತು. ಹಾಗೇನಾದರೂ ಆದರೆ ಆತ್ಮಹತ್ಯೆಯೇ ತನಗೆ ಉಳಿದ ದಾರಿ ಎಂದವನು ನಿರ್ಧರಿಸಿಬಿಟ್ಟಿದ್ದ.

ಕಲ್ಯಾಣಿಯ ಮದುವೆ ಬಹಳ ವಿಜೃಂಭಣೆಯಿಂದಲೇ ನಡೆಯಿತು. ಅವಳೇ ಎಲ್ಲರಿಗಿಂತಲೂ ಕಿರಿಯವಳಾದುದರಿಂದ ವೆಂಕಟಾಚಲಯ್ಯನವರು ಧಾರಾಳವಾಗಿ ಹಣ ಖರ್ಚುಮಾಡಿ ಮದುವೆ ಮಾಡಿದರು. ಶೇಷಯ್ಯನವರ ಪರಿವಾರವನ್ನೆಲ್ಲಾ ಊಟ, ಉಪಚಾರಗಳಿಂದ ತೃಪ್ತಿಪಡಿಸಿ, ತಮ್ಮ ಶಕ್ತಿ

ಮೀರಿ ಎಲ್ಲರಿಗೂ ಉಡುಗೊರೆಗಳನ್ನು ಕೊಟ್ಟರು. ಶೇಷಯ್ಯನವರೂ ಮಗನ ಮದುವೆಯ ವೈಭವವನ್ನು ಕಂಡು ಹಿಗ್ಗಿದರು. ತಮ್ಮ ಕೈಯಿಂದ ಹಣ ಖರ್ಚುಮಾಡದೆ ಇತರರ ಖರ್ಚಿನಲ್ಲಿ ಆನಂದ ಅನುಭವಿಸುವ ಸ್ವಭಾವ ಶೇಷಯ್ಯನವರದು.

ಮದುವೆಯಲ್ಲಿ ಶೇಷಯ್ಯನವರಿಗೆ ತುಂಬಾ ಅಚ್ಚರಿಯನ್ನುಂಟು ಮಾಡಿದ್ದು ಬೀಗರ ಜೋಡಿ.

ಮನೆಯಲ್ಲಿ ತಮ್ಮದೇ ವೇದವಾಕ್ಯ. ಸಾತಮ್ಮ ಪತಿಯ ಅಡಿಯಾಳಾಗಿದ್ದರು. ಮದುವೆ ಮನೆಯಲ್ಲಿ ವಿಜಯಮ್ಮನೇ ಎಲ್ಲ ವಿಷಯಗಳಿಗೂ ಯಜಮಾನಿಕೆ ವಹಿಸಿದ್ದುದು ಅವರಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತ್ತು.

ವೆಂಕಟಾಚಲಯ್ಯನವರ ಸ್ವಭಾವವನ್ನು ಅರಿತಿದ್ದವರೆಲ್ಲಾ ಏನು ಕೇಳಬೇಕಾದರೂ, ಹೇಳಬೇಕಾದರೂ ವಿಜಯಮ್ಮನನ್ನು ಹುಡುಕಿಕೊಂಡು ಹೋಗುತ್ತಿದ್ದರು. ಒಂದು ಪಕ್ಷ ಯಾರಾದರೂ ಅಪ್ಪಿತಪ್ಪಿ ವೆಂಕಟಾಚಲಯ್ಯನವರ ಬಳಿಗೆ ಬಂದರೆ ಅವರು,

"ಅವಳಿಗೆ ಹೇಳಿ" ಎಂದು ಬಿಡುತ್ತಿದ್ದರು.

ಒಮ್ಮೆ ಶೇಷಯ್ಯನವರು ಬೀಗರ ಹತ್ತಿರ ಮಾತನಾಡುತ್ತಿದ್ದಾಗ ಯಾರೋ ಬಂದು ಸಾಮಾನಿಗಾಗಿ ವೆಂಕಟಾಚಲಯ್ಯನವರನ್ನು ಕೇಳಿದರು. ಆತ

"ಅಯ್ಯಾ, ಖಜಾನ ಬೀಗದ ಕೈ, ಉಗ್ರಾಣದ ಬೀಗದ ಕೈ ಎರಡೂ ಅವಳ ಹತ್ತಿರ ಇವೆ" ಎಂದರು.

ಅವರ ಮಾತು ಕೇಳಿ ಶೇಷಯ್ಯನವರಿಗೆ ಎರಡು ಗಳಿಗೆ ಬಾಯಿಂದ ಮಾತು ಹೊರಡಲಿಲ್ಲ.

ಗಂಡ ಎನ್ನಿಸಿಕೊಂಡವನು ಬದುಕಿರುವಾಗಲೇ ಖಜಾನೆಯನ್ನು ಹೆಂಡತಿಗೊಪ್ಪಿಸುವುದು ಎಂದರೆ ಶೇಷಯ್ಯನವರ ಪಾಲಿಗಂತೂ ನಂಬಲಸಾಧ್ಯವಾದ ಸುದ್ದಿಯಾಗಿತ್ತು.

ಹೆಂಡತಿಯನ್ನು ನಂಬುವುದಾದರೂ ಹೇಗೆ?

ಶೇಷಯ್ಯನವರಿಗೆ ಮದುವೆಯಾಗಿ ಹೆಂಡತಿ ಮನೆಗೆ ಬಂದು ಮೂವತ್ತೇಳು ವರ್ಷಗಳಾಗಿದ್ದರೂ ಆತನಿಗೆ ಆಕೆಯಲ್ಲಿ ನಂಬಿಕೆ ಇರಲಿಲ್ಲ. ಮೂರು

ಕಾಸಿನ ಸಾಮಾನು ತರುವ ಜವಾಬ್ದಾರಿಯನ್ನೂ ಆತ ಹೆಂಡತಿಗೆ ಒಪ್ಪಿಸಿರಲಿಲ್ಲ. ಆಕೆಯ ಖರ್ಚಿಗಾಗಿ ಆತ ಒಂದು ದಿನ ಮೂರುಕಾಸನ್ನೂ ಕೊಟ್ಟಿರಲಿಲ್ಲ. ಸಾತಮ್ಮನೇ ಯಾವಾಗಲಾದರೂ ಕಾಸು ಬೇಕಾಗಿದ್ದು ಹಠಹಿಡಿದು ಕೇಳಿದಾಗ ಶೇಷಯ್ಯನವರು ಕೇಳುತ್ತಿದ್ದರು.

"ವರ್ಷಕ್ಕೆರಡು ಸೀರೆ, ರವಿಕೆ ತೆಗೆದುಕೊಡುತ್ತೇನೆ. ಮನೆಗೆ ಬೇಕಾಗುವ ಸಾಮಾನುಗಳನ್ನೆಲ್ಲಾ ತಂದು ಹಾಕುತ್ತೇನೆ. ನಿನಗಿನ್ನೇನು ಖರ್ಚಿದೆ" ಎಂದು ಕೇಳುತ್ತಿದ್ದರು.

"ಏನಾದರೂ ಹೂವು, ಗೀವು...."

"ಹೂವಿಗ್ಯಾಕೆ ದುಡ್ಡು ದಂಡ. ಈಗ ಮುಡಿದರೆ ಇನ್ನೊಂದು ಗಳಿಗೆಗೆ ಬಾಡುತ್ತದೆ. ಅದೂ ಅಲ್ಲದೆ ನರೆತ ತಲೆಕೂದಲಿನ ಗಂಟಿನ ಮೇಲೆ ಹೂವು ಮುಡಿದರೂ ಚೆಂದ ಕಾಣೋಲ್ಲ"

"ತಲೆ ಕೂದಲು ಕಪ್ಪಾಗಿದ್ದಾಗಲೂ ನೀವು...."

"ಕಳೆದು ಹೋದ ಮಾತೇಕೆ? ಈಗಿನದನ್ನ ಹೇಳು" ಎಂದು ಹೇಳಿ ಹೆಂಡತಿಯನ್ನು ಸುಮ್ಮನಾಗಿಸುತ್ತಿದ್ದರು.

ಮನೆಗೆ ತರುವ ಸಾಮಾನುಗಳನ್ನೂ ಅಷ್ಟೆ ಎಷ್ಟು ಬೇಕೋ ಅಷ್ಟು ಕ್ಲುಪ್ತವಾಗಿ ತಂದು ಹಾಕುತ್ತಿದ್ದರು. ಹೆಚ್ಚಿಗೆ ತಂದರೆ ಹೆಂಡತಿ ದುಂದು ವೆಚ್ಚ ಮಾಡಿಬಿಟ್ಟರೆ?

ಎರಡು ಬಗೆಯ ತರಕಾರಿಯನ್ನು ತಂದು ಹೆಂಡತಿಗೆ ಸಾರಿ ಸಾರಿ ಎಚ್ಚರಿಕೆ ಹೇಳುತ್ತಿದ್ದರು.

"ಎರಡು ದಿನ ಮಾಡಿಕೋ. ಒಂದೇ ದಿನ ಎರಡು ತರಹ ಮಾಡಿ ಬಿಡಬೇಡ"

ಸೌದೆಯ ಉಳಿತಾಯಕ್ಕಾಗಿ ಶೇಷಯ್ಯನವರು ಪಡುತ್ತಿದ್ದ ಪಾಡು ಯಾರಿಗೂ ಬೇಡ.

ಬೆಳಗಾಗೆದ್ದು ಮನೆಯ ಕಾಂಪೌಂಡನ್ನೆಲ್ಲಾ ಹುಡುಕಾಡಿ ಒಣಗಿದ ತರಗು, ಕಡ್ಡಿ, ಪುರಲೆ ಇವುಗಳನ್ನು ಸಂಗ್ರಹಮಾಡಿ ಬಚ್ಚಲು ಮನೆಯಲ್ಲಿ ಇರಿಸುತ್ತಿದ್ದರು.

"ಪುರಲೆ ಎಲ್ಲಾ ಹಾಕಿ ಒಂದು ಸೌದೆ ಇಡು ಸಾಕು, ನೀರು ಉಗುರು

ಬೆಚ್ಚಗಾದರೆ ಸಾಕು. ನಮ್ಮ ಉಷ್ಣ ದೇಶದಲ್ಲಿ ನೀರನ್ನು ತುಂಬಾ ಕಾಯಿಸ ಬಾರದು. ಮೈಗೆ ಒಳ್ಳೆಯದಲ್ಲ...."

ಎಂದು ಆರೋಗ್ಯ ದೃಷ್ಟಿಯಿಂದ ಆ ವಿಷಯವನ್ನು ಒತ್ತಿ ಹೇಳು ತ್ತಿದ್ದರು.

ಆ ದು ದ ರಿಂ ದ ಲೇ ಶೇಷಯ್ಯನವರಿಗೆ ವೆಂಕಟಾಚಲಯ್ಯನವರ ಮಾತನ್ನು ಕೇಳಿ ಅತ್ಯಾಶ್ಚರ್ಯವಾಯಿತು.

ಸಮಯ ನೋಡಿ ಬೀಗರಿಗೆ ಬುದ್ಧಿವಾದ ಹೇಳಬೇಕೆಂದು ಶೇಷಯ್ಯ ನವರು ನಿಶ್ಚಯಿಸಿದರು.

ತನ್ನೆಲ್ಲಾ ಕನಸು, ಆದರ್ಶಗಳೇ ರೂಪುಗೊಂಡಂತಿದ್ದ ರಾಮನಾಥ ತನ್ನ ಪತಿಯಾದುದು ಕಲ್ಯಾಣಿಗೆ ಅಪರಿಮಿತ ಆನಂದವನ್ನು ಉಂಟು ಮಾಡಿತ್ತು.

ಅವಳಿಗೆ ತನ್ನ ಬದುಕು ಪೂರ್ಣವಾಯಿತು ಎನಿಸಿತು. ತನ್ನ ಮದು ವೆಯ ಬಗ್ಗೆ ಯಾವ ಯೋಚನೆಯನ್ನು ಇರಿಸಿಕೊಳ್ಳದಿದ್ದ ಅವಳಿಗೆ ಹಠಾ ತ್ತನೆ ರಾಮನಾಥನಂತಹ ಒಳ್ಳೆಯ ಹುಡುಗ ಪತಿಯಾಗಿ ಸಿಕ್ಕಿದ್ದು ತನ್ನ ಅದೃಷ್ಟವೆನಿಸಿತು.

ಜೀವನ ಒಂದು ಸುಂದರವಾದ ಕನಸು ಎನಿಸಿತು ಕಲ್ಯಾಣಿಗೆ.

ವತ್ಸಲೆಗೂ ಹಿಗ್ಗು—ತನ್ನಣ್ಣ ಸುಬ್ಬರಾಮುವಿನ ಮದುವೆಗೆ ಕಲ್ಯಾಣಿ ಬಂದುದರಿಂದಲೇ ಅವಳಿಗೆ ರಾಮನಾಥ ಸಿಕ್ಕಿದ ಎಂದು.

ಅವಳು ಕಲ್ಯಾಣಿಯನ್ನು ಹಾಸ್ಯಮಾಡಿದಳು.

"ಸುಬ್ಬಣ್ಣನ ಮದುವೆಗೆ ನೀನು ಬರದಿದ್ದರೆ ನಿನಗೆ ರಾಮನಾಥ ಎಲ್ಲಿ ಸಿಕ್ತಿದ್ದ ?"

"ನನ್ನ ಮದುವೆ ನಿಮ್ಮ ಸುಬ್ಬಣ್ಣನ ಮದುವೆ ಪ್ರಭಾವ ಅನ್ನಿ."

"ಅಷ್ಟಲ್ಲದೆ? ಕಲ್ಯಾಣಿ! ಹಸೆ ಮೇಲೆ ಕುಳಿತುಕೊಂಡು ಅಷ್ಟೊಂದು ಮಾತನಾಡಿದರಲ್ಲಾ ಏನದು ?"

ವತ್ಸಲೆಯ ಮಾತು ಕೇಳಿ ಕಲ್ಯಾಣಿ ನಾಚಿದಳು.

"ಇಲ್ಲವಲ್ಲ" ಎಂದಳು ಅವಳು ಮುಗ್ಧತೆಯನ್ನು ನಟಿಸಿ.

"ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕು ಡಿ ದ ರೆ ಉಳಿದವರಿಗೆ

ತಿಳಿಯುವುದಿಲ್ಲವೇ?"

"ನೀವು ನಿಮ್ಮ ಮದುವೇಲಿ ಅನಂತನ ಕೈಲಿ ಮಾತನಾಡಿದಿರಾ?"

"ನೀನೇ ಮದುವೆಗೆ ಬಂದಿದ್ದೆಯಲ್ಲಾ ಹೇಳು"

"ನನಗೆ ನೆನಪಿಲ್ಲ."

"ಇಲ್ಲಮ್ಮ. ನಾನು ಬಗ್ಗಿಸಿದ ತಲೆ ಮೇಲಕ್ಕೆತ್ತಲಿಲ್ಲ.

"ತಲೆ ಮೇಲಕ್ಕೆತ್ತದೆ ಮಾತನಾಡೋಕಾಗೋದಿಲ್ಲವೇ?"

"ನಾನು ಒಂದು ಮಾತೂ ಆಡಲಿಲ್ಲ. ನೀವು ಅಷ್ಟೊಂದು ಮಾತನಾಡಿದಿರಲ್ಲಾ ಏನದು?"

"ಸ್ವಂತದ್ದು."

"ಬಹಳ ಖಾಸಗಿಯಾದುದೇ?"

"ಹೂಂ." ಎನ್ನುತ್ತ ಕಲ್ಯಾಣಿ ನಕ್ಕಳು.

ವತ್ಸಲೆ ಗಮನಿಸಿದಂತೆ ಇತರರೂ ಕಲ್ಯಾಣಿ, ರಾಮನಾಥ ಹಸೆಯ ಮೇಲೆ ಕುಳಿತು ಗಂಟೆಗಟ್ಟಲೆ ಹರಟಿದ್ದನ್ನು ಗಮನಿಸಿದ್ದರು.

ವಿಜಯಮ್ಮ 'ಇದೇನು ಕೇಡು' ಎಂದು ಸುತ್ತಲೂ ಇದ್ದವರಿಗೆ ಕೇಳುವಂತೆ ಗುಡುಗಿದ್ದರು.

ಸಾತಮ್ಮ ನಾಚಿ ನೀರಾದರು. ಬಾಸಿಂಗ ಕಟ್ಟಿಕೊಂಡಿದ್ದ ಮಗ ಕಂಕಣದ ಕೈಯಿನ ಸೊಸೆಯೊಡನೆ ಹರಟುತ್ತಿದ್ದುದನ್ನು ನೋಡಿ ಸಾತಮ್ಮನ ಸುಕ್ಕುಗಟ್ಟಿದ್ದ ಕೆನ್ನೆ ಕೆಂಪಾಯಿತು.

ಆದರೆ ಮಗ ಸಂತೋಷವಾಗಿದಾನೆ. ಅದು ಮುಖ್ಯ ಎಂದು ಅವರು ಹಾಗೆಯೇ ಸಮಾಧಾನ ಮಾಡಿಕೊಂಡರು.

ವಿಜಯಮ್ಮ ಆನಂದನೊಡನೆ ಒಂದೆರಡು ಬಾರಿ ಕಲ್ಯಾಣಿಗೆ ಎಚ್ಚರಿಕೆಯ ಮಾತು ಹೇಳಿಕಳುಹಿಸಿದ್ದರು.

"ಮಾಮನ ಕೈಲಿ ನೀನು ಮಾತನಾಡಬಾರದಂತೆ" ಎಂದು ಆನಂದ ಎರಡು ಬಾರಿ ಬಂದು ಕಲ್ಯಾಣಿಯ ಕಿವಿಯಲ್ಲಿ ಪಿಸುಗುಟ್ಟಿಹೋಗಿದ್ದ.

ಆದರೆ ಮಾವ ತಾನಾಗಿಯೇ ಮಾತನಾಡಿಸುವಾಗ ಕಲ್ಯಾಣಿಯಾದರೂ ಸುಮ್ಮನಿರುವುದು ಹೇಗೆ?

ವಿಜಯಮ್ಮ ದೂರದಿಂದಲೇ ಕಣ್ಣರಳಿಸಿ ಮಗಳನ್ನು ಹೆದರಿಸಿದರೂ

ಪ್ರಯೋಜನವಾಗಲಿಲ್ಲ. ಅತ್ತೆಯ ಮಿಡುಕಾಟ ನೋಡಿ ಕೊನೆಗೆ ವತ್ಸಲೆ ಸಮಾಧಾನ ಹೇಳಿದ್ದಳು.

"ಬಿಡಿ ಅತ್ತೆ. ಅವಳ ಗಂಡನ ಜೊತೆ ತಾನೆ ಅವಳು ಮಾತನಾಡೋದು? ನೀವ್ಯಾಕೆ ಒದ್ದಾಡ್ತೀರಿ?"

"ನೋಡಿದವರು ನಗೋದಿಲ್ಲವೆ?"

"ಯಾಕೆ ನಗುತ್ತಾರೆ? ಈಗಿನ ಕಾಲದಲ್ಲಿ ಹಸೆಮೇಲೆ ಮಾತು ನಾಡೋದೆ ಒಂದು ಫ್ಯಾಷನ್."

"ಅಂತಹದೇನಿರುತ್ತದೆ ಮಾತನಾಡುವ ವಿಷಯ?"

"ಒಬ್ಬರನ್ನೊಬ್ಬರು ಅರಿಯುವ ಕುತೂಹಲ ಅಷ್ಟೆ."

"ಮುಂದೆ ಜೀವಮಾನ ಪೂರ್ತಿ ಇರುತ್ತದೆಯಲ್ಲಾ ಒಬ್ಬರನ್ನೊಬ್ಬರು ತಿಳಿದುಕೊಳ್ಳುವುದಕ್ಕೆ."

"ಬಿಸಿಯಾಗಿದ್ದಾಗಿನ ರುಚಿ ಆರಿದ ಮೇಲೆ ಇರೋದಿಲ್ಲ."

"ಒಳ್ಳೆಯ ಬಿಸಿ! ಹುಂ–ಏನಾದರೂ ಮಾಡಿಕೊಳ್ಳಲಿ. ಅವರು ಗಂಡ, ಹೆಂಡತಿ ಚೆನ್ನಾಗಿರೋದು ನನಗೆ ಮುಖ್ಯ" ಎಂದು ಮಾತು ಮುಗಿಸಿದ್ದರು ವಿಜಯಮ್ಮ.

ಆದುದರಿಂದಲೇ ಕಲ್ಯಾಣಿ ವಿರಾಮವಾಗಿ ಕುಳಿತಿದ್ದ ಸಮಯ ನೋಡಿ ವತ್ಸಲೆ ಹಾಸ್ಯವಾಗಿ ನಾದಿನಿಯನ್ನು ಕೀಟಲೆ ಮಾಡಿದ್ದಳು.

"ನಂಗೊಬ್ಬಳಿಗೆ ಹೇಳಿಬಿಡು, ಏನೇ...." ವತ್ಸಲೆ ಮತ್ತೆ ಮಾತು ತೆಗೆದಳು.

"ಏನನ್ನ?"

"ನೀವಿಬ್ಬರೂ ಏನು ಮಾತಾಡುತ್ತಿದ್ದಿರಿ?"

"ಏನೂ ಇಲ್ಲಾರಿ ..."

"ಹೇಳೇ ಸಾಕು. ನಂಗೊಬ್ಬಳಿಗೆ ಹೇಳಿಬಿಡು. ಕಿವಿಯಲ್ಲಿ....ಮೆಲ್ಲಗೆ ....ನಾನು ಯಾರಿಗೂ ಹೇಳೋಲ್ಲ......"

"ನೀವು ನಗುತ್ತೀರೇನೋ?"

"ನಗೋಲ್ಲ. ಹೇಳಮ್ಮ."

ಅತ್ತಿಗೆ ತನಗೆ ಅತ್ಯಂತ ಆಪ್ತಳಂತೆ ತೋರಿದಳು. ತನ್ನ ಹೃದಯದ

ರಹಸ್ಯವನ್ನು ಆಕೆ ಕೊನೆಯುವರೆಗೂ ಕಾಪಾಡಬಲ್ಲಳು ಎನಿಸಿತು ಕಲ್ಯಾಣಿಗೆ.

ಕಲ್ಯಾಣಿ ರಾಜಕೀಯ ರಹಸ್ಯವೊಂದನ್ನು ಬಯಲು ಮಾಡಲು ಹೆದರುವ ರಾಜಕಾರಣಿಯಂತೆ ಆತಂಕದಿಂದ ವತ್ಸಲೆಯ ಬಳಿ ಬಾಗಿ,

"ಪ್ರೀತಿಯ ವಿಷಯ" ಎಂದಳು.

"ಹಾಗಂದರೆ?"

ವತ್ಸಲೆ ಯಾವುದೂ ಅರ್ಥವಾಗದವಳಂತೆ ಕೇಳಿದಳು.

"ಅಯ್ಯೋ ಹೋಗಿ. ನಾನಿನ್ನು ಹೇಳೋದಿಲ್ಲ. ಅಷ್ಟು ಹೇಳಿದ್ದೇ ಹೆಚ್ಚು. ಅದರಿಂದ ನೀವು ಏನೇನು ಬೇಕಾದರೂ ಅರ್ಥಮಾಡಿಕೊಳ್ಳಿ."

"ಯಾರ ಪ್ರೀತಿಯ ವಿಷಯ?"

"ನಮ್ಮ ನಮ್ಮದು."

"ಪ್ರೀತಿ ಇದೆಯೋ ಇಲ್ಲವೋಂತಾನಾ?"

"ಹೋಗಿ ಅತ್ತಿಗೆ" ಎನ್ನುತ್ತಾ ಕಲ್ಯಾಣಿ ಅತ್ತಿಗೆಯನ್ನು ದೂರ ಸರಿಸಿದಳು.

ಆನಂದ ಓಡಿ ಬಂದು "ಅತ್ತೆ, ಮಾವ ಕರೆಯುತ್ತಿದ್ದಾರೆ" ಅಂದ.

ಗಂಡನನ್ನು ಬಹಳ ಕಾಲ ಅಗಲಿದ್ದ ವಿರಹಿಣಿಯ ಆತುರದಲ್ಲಿ ಕಲ್ಯಾಣಿ ರಾಮನಾಥ ಇದ್ದ ರೂಮಿಗೆ ಓಡಿಹೋದಳು.

ವತ್ಸಲೆಗೆ ನಾದಿನಿಯ ಆತುರ ನೋಡಿ ನಗು ಬಂತು. ವಿಜಯಮ್ಮನಿಗೆ ಮದುವೆಯಾದ ಮೂರನೆಯ ದಿನವೇ ಅಳಿಯ, ಮಗಳು ಗಂಟೆಗಟ್ಟಲೆ ರೂಮಿನಲ್ಲಿ ಕುಳಿತು ಮಾತನಾಡುವುದು ಹಿಡಿಸಲಿಲ್ಲ.

ಈ ಬಾರಿ ಕಲ್ಯಾಣಿ ಓಡಿಹೋದುದನ್ನು ನೋಡಿ ವಿಜಯಮ್ಮ ಮುಖ ಗಂಟಿಕ್ಕಿ

"ಇದೇನು ಕೇಡು, ಇನ್ನೂ ಎರಡನೆಯ ಶಾಸ್ತ್ರ ಆಗಿಲ್ಲ, ಈಗಿನಿಂದಲೂ ...." ಎನ್ನುತ್ತಾ ವತ್ಸಲೆಯ ಮುಖ ನೋಡಿದರು.

ವತ್ಸಲೆ ಯಾವಾಗಲೂ ಕಲ್ಯಾಣಿಯ ಪರ ವಹಿಸಿ ಮಾತನಾಡುವಳೆಂದು ವಿಜಯಮ್ಮನಿಗೆ ತಿಳಿದಿತ್ತು.

"ಇನ್ನೂ ಹುಡುಗಿ. ಹೊಸಪರಿ...." ವತ್ಸಲೆ ಕಲ್ಯಾಣಿಯ ಪರ ವಹಿಸಿದಳು.

"ನೋಡಿದವರು ಏನೆಂದುಕೊಳ್ಳುತ್ತಾರೆ ?"

"ನೋಡಿದವರನ್ನು ಮೆಚ್ಚಿಸಬೇಕಾಗಿಲ್ಲ. ಗಂಡನನ್ನು ಮೆಚ್ಚಿಸಿದರೆ ಸಾಕು"

"ಆದರೂ ಜನರ ಬಾಯಿಗೆ ..."

"ಬಿಡಿ ಅತ್ತೆ. ಜನರನ್ನು ಕಟ್ಟಿಕೊಂಡು ಸಂಸಾರ ಮಾಡಬೇಕಾಗಿಲ್ಲ. ಏನೋ ಎಲ್ಲಾ ಹೊಸದು..."

"ಮುಂದೆ ಇದ್ದೆ ಇದೆಯಲ್ಲಾ...."

"ಆಗಲೇ ಹೇಳಿದೆನಲ್ಲಾ–ಯಾವುದೂ ಬಿಸಿಯಲ್ಲಿ ರುಚಿ. ಆರಿದ ಮೇಲೆ ಯಾವುದೂ ರುಚಿಯಾಗಿರೋದಿಲ್ಲ."

ವಿಜಯಮ್ಮನಿಗೆ ಮತ್ತೆ ರುಚಿಯ ಮಾತು ಕೇಳಿ ನಗು ಬಂತು.

ಮದುವೆಯಾದ ಮಾರನೆಯ ದಿನ ಸಂಜೆಯೇ ರಾಮನಾಥ ಹೆಂಡತಿ ಯೊಡನೆ ಸಿನಿಮಾಗೆ ಹೋಗಲು ಅಪೇಕ್ಷೆಪಟ್ಟ.

ಆದರೆ ಆಗ ಮಾತ್ರ ಸಾತಮ್ಮ, ವಿಜಯಮ್ಮ ಅವನ ಅಪೇಕ್ಷೆಯನ್ನು ಪ್ರತಿಭಟಿಸಿದರು.

ಸಾತಮ್ಮ ಮಗನಿಗೆ "ಮಗೂ, ಅವಳ ಮೈಮೇಲಿನ ಅರಿಶಿನದ ನೀರಿನ್ನೂ ಆರಿಲ್ಲ. ಹಸಿ ಮೈಯಿನ ಹುಡುಗಿ. ಈಗ ಖಂಡಿತ ಹೊರಗೆ ಕರೆದುಕೊಂಡು ಹೋಗಬೇಡ" ಎಂದರು.

ವಿಜಯಮ್ಮನೂ ಆದಷ್ಟು ನಮ್ರತೆಯಿಂದ ವಿನಯವಾಗಿ ಅಳಿಯ ದೇವರಿಗೆ ತಮ್ಮ ಅಹವಾಲನ್ನು ಹೇಳಿಕೊಂಡರು.

ಸಿನಿಮಾಗೆ ಹೊರಡಲು ಸಿದ್ಧರಾಗಿ ನಿಂತಿದ್ದ ರಾಮನಾಥ, ಕಲ್ಯಾಣಿ ಯರಿಗೆ ಮಾತ್ರ ತುಂಬ ನಿರಾಶೆಯಾಯಿತು.

"ಸಿನಿಮಾಗೆ ಬೇಡ. ಹೋಗಲಿ ವಾಕಿಂಗು...." ಎಂದ ರಾಮನಾಥ.

"ಯಾವುದೂ ಬೇಡ. ಸಿನಿಮಾ ಏನು, ವಾಕಿಂಗ್ ಏನು? ಇದೊಂದು ವಿಷಯದಲ್ಲಿ ನನ್ನ ಮಾತು ಕೇಳು" ಎಂದರು ಸಾತಮ್ಮ.

ರಾಮನಾಥ ವಿಧಿಯಿಲ್ಲದೆ ಸುಮ್ಮನಾದ.

ತಮ್ಮ ಉತ್ಸಾಹ, ಆನಂದಕ್ಕೆ ಭಂಗತಂದ ಹಿರಿಯರನ್ನು ನೋಡಿ ಎಲ್ಲಿಲ್ಲದ ಕೋಪ, ಅಳು ಬಂತು ಕಲ್ಯಾಣಿಗೆ.

ಪ್ರೇಮಿಗಳ ಆನಂದಕ್ಕೆ ಭಂಗ ತಂದವರು ಅವಳ ಕಣ್ಣಿನಲ್ಲಿ ಮಹಾ ಕ್ರೂರಿಗಳಾಗಿ, ಖಳರಾಗಿ ಕಂಡರು. ತಾವು ಓಡಾಡುವುದು ಅವರಿಗೆ ಕಣ್ಣುರಿ, ಹೊಟ್ಟೆಉರಿ ಎಂದು ಕಲ್ಯಾಣಿ ಭಾವಿಸಿಕೊಂಡಳು.

ಕಲ್ಯಾಣಿ ಅಳು ತಡೆಯಲಾರದೆ ರೂಮಿನೊಳಗೆ ಓಡಿಹೋದಳು. ಹೆಂಡತಿಗೆ ನಿರಾಶೆಯಾದುದನ್ನು ಕಂಡು ರಾಮನಾಥನಿಗೂ ಕಸಿವಿಸಿಯಾಯಿತು.

ಅವಳು ಅದೆಷ್ಟು ಉತ್ಸಾಹದಿಂದ ಹೊರಗೆ ಹೊರಡುವ ಸಿದ್ಧತೆಯನ್ನು ಮಾಡಿದ್ದಳು!

ತನ್ನ ಸೀರೆಯ ಟ್ರಂಕನ್ನು ಗಂಡನ ಮುಂದಿರಿಸಿ ಅವನು ಆರಿಸಿ ಕೊಟ್ಟ ಸೀರೆ, ರವಿಕೆ ಧರಿಸಿ ಹೊರಗೆ ಹೊರಟಿದ್ದಳು.

ರಾಮನಾಥನೂ ಕಲ್ಪಿಸಿಕೊಂಡ–ತಾವಿಬ್ಬರೂ ಬೀದಿಯಲ್ಲಿ ಹೊರಟರೆ ಅವೆಷ್ಟು ಜೊತೆ ಕಣ್ಣುಗಳು ಅಸೂಯೆಯಿಂದ ತಮ್ಮ ಕಡೆ ನೋಡುವುವೋ?

ರಾಮನಾಥ ಒಂದು ಗಳಿಗೆ ಸುಮ್ಮನೆ ನಿಂತಿದ್ದು ಅನಂತರ ಕಲ್ಯಾಣಿಯಿದ್ದ ರೂಮಿಗೆ ನಿಧಾನವಾಗಿ ಹೋದ.

ಕಲ್ಯಾಣಿ ಅಲ್ಲಿದ್ದ ಮಂಚವೊಂದರ ಮೇಲೆ ಬೋರಲಾಗಿ ಮಲಗಿ ಬಿಕ್ಕುತ್ತಿದ್ದಳು.

"ನೋಡು ಚಿನ್ನ, ನೀನತ್ತರೆ ನನಗೆ ತುಂಬಾ ದುಃಖವಾಗುತ್ತೆ. ಇಲ್ಲಿ ನೋಡಿಲ್ಲಿ...."

ಎನ್ನುತ್ತಾ ರಾಮನಾಥ ಅವಳನ್ನು ಹಿಡಿದೆತ್ತಿದ.

ನಿಜವಾಗಿಯೂ ಅವಳ ಕಣ್ಣುಗಳಿಂದ ಕಂಬನಿ ಹರಿಯುತ್ತಿತ್ತು. ರಾಮನಾಥ ಅವಳ ಕೆನ್ನೆಯ ಮೇಲೆ ಹರಿಯುತ್ತಿದ್ದ ಕಂಬನಿಯನ್ನು ಒರೆಸಿ ಮಕ್ಕಳನ್ನು ಮುದ್ದು ಮಾಡುವಂತೆ ಮಾಡಿದ.

"ನೀನತ್ತರೆ ನನ್ನಾಣೆಯಿದೆ. ನಿಂಗೆ ನನ್ನ ಮೇಲೆ ಪ್ರೀತಿ ಇದ್ದರೆ ಅಳಬಾರದು. ನಂಗೋಸ್ಕರ.... ನನಗಾಗಿ ಸಮಾಧಾನ ಮಾಡಿಕೋ ರಾಣಿ"

"ನನ್ನ ಮೇಲೆ ಪ್ರೀತಿ ಇದ್ದರೆ ಅಳಬಾರದು' ಎಂದು ರಾಮನಾಥ ಹೇಳಿದ್ದನ್ನು ಕೇಳಿ ಕಲ್ಯಾಣಿ ತನ್ನ ದುಃಖವನ್ನು ಸ್ವಲ್ಪ ಹತೋಟಿಗೆ ತಂದುಕೊಂಡಳು.

"ಅನ್ಯಾಯವಾಗಿ ಮೇಕಪ್ ಕೆಟ್ಟುಹೋಯಿತು. ಮತ್ತೆ ಪೌಡರ್ ಹಚ್ಚಿಕೊಂಡು ನಿನ್ನ ರಾಮನಾಥನ ಕಣ್ಣಿಗೆ ಹಬ್ಬ ಮಾಡು"

ಕಲ್ಯಾಣಿ ಅತ್ಯಂತ ವಿಧೇಯತೆಯಿಂದ ಪೌಡರಿನ ಡಬ್ಬವನ್ನು ತೆಗೆದುಕೊಂಡು ಕನ್ನಡಿಯ ಮುಂದೆ ಕುಳಿತಳು.

"ನಾನೇ ಹಚ್ಚುತ್ತೀನಿ ಕೊಡು."

"ನಿಮಗೆ ಬರೋದಿಲ್ಲ."

"ನೀನು ಕಲಿಸಿಕೊಡು" ಎನ್ನುತ್ತಾ ರಾಮನಾಥ ಪೌಡರಿನ ಡಬ್ಬವನ್ನು ಕೈಗೆ ತೆಗೆದುಕೊಂಡು ಅಂಗೈಗೆ ಸುರಿದು ಕೆನ್ನೆಗೆ ಹುಚ್ಚುಚ್ಚಾಗಿ ಬಳಿದ.

ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ಕಲ್ಯಾಣಿಗೆ ನಗು ಬಂತು.

"ನಾನು ಬೀದಿಯಲ್ಲಿ ಹೀಗೆ ಹೊರಟರೆ ಮುಗಿಯಿತು ನನ್ನ ಗತಿ"

"ಯಾಕೋ?"

"ಹೀಗಾ ಹಚ್ಕೋೕದು...." ಎನ್ನುತ್ತಾ ಕಲ್ಯಾಣಿ ಹೆಚ್ಚಿಗೆ ಪೌಡರನ್ನು ಕರವಸ್ತ್ರದಿಂದ ಒರೆಸಿದಳು.

"ದುಃಖ ಹೋಯಿತಾ?"

"ಊಂ....ಊಂ...." ಎನ್ನುತ್ತಾ ಕಲ್ಯಾಣಿ ಅವನೆದೆಗೆ ಒರಗಿದಳು.

ರಾಮನಾಥ ಆವಳ ಬಗ್ಗೆ ತನಗಿದ್ದ ಪ್ರೀತಿಯನ್ನು ಸುಮಾರು ಅರ್ಧ ಗಂಟೆಯ ಕಾಲ ವಿವರಿಸಿದ. ಕಲ್ಯಾಣಿ ಕಣ್ಣು ಮುಚ್ಚಿ ಹೃದಯೇಶ್ವರನ ಮಾತಿನ ಪ್ರವಾಹದಲ್ಲಿ ತೇಲಿಹೋದಳು.

ಅಷ್ಟರಲ್ಲಿ ಆನಂದ ಹೊಸಲಿನಾಚೆ ಪ್ರತ್ಯಕ್ಷನಾದ.

"ಅತ್ತೆ, ಅಜ್ಜಿ ಕರೀತಿದಾರೆ."

"ಯಾಕೋ?" ಎಂದಳು ಕಲ್ಯಾಣಿ ಬೇಸರದಿಂದ.

"ಯಾರೋ ಬಂದಿದಾರೆ. ಅವರಿಗೆ ನಮಸ್ಕಾರ ಮಾಡೋಕೆ ಬರಬೇಕಂತೆ."

ಕಲ್ಯಾಣಿ ಹೊರಗೆ ಹೋದಳು.

ವಿಜಯಮ್ಮನಿಗೆ ಮಗಳು, ಅಳಿಯನನ್ನು ಒಟ್ಟಿಗೆ ಎರಡುಗಳಿಗೆ ಬಿಟ್ಟ

ರಲು ಹೆದರಿಕೆ. ಎರಡನೆಯ ಶಾಸ್ತ್ರಕ್ಕೆ ಮುಂಚೆ ಎಲ್ಲಿ ಅನಾಹುತವಾಗಿ ಬಿಡುವುದೋ ಎಂದು ಅವರಿಗೆ ದಿಗಿಲು. ಆದುದರಿಂದಲೇ ಅವರು ಆಗಾಗ್ಗೆ ಆನಂದನನ್ನು ಅವರ ರೂಮಿಗೆ ಅಟ್ಟಿ ಏನಾದರೊಂದು ನೆಪದಿಂದ ಕಲ್ಯಾಣಿ ಯನ್ನು ಹೊರಗೆ ಬರಮಾಡಿಕೊಳ್ಳುತ್ತಿದ್ದರು.

ಮದುವೆಯಾದ ಮೂರು ದಿನಗಳ ನಂತರ ರಾಮನಾಥನ ಮನೆಯು ವರು ತಮ್ಮ ಊರಿಗೆ ಹೊರಟರು.

ಶೇಷಯ್ಯನವರು ಮದುವೆಯ ಮನೆಯಲ್ಲಿ ಸಂಗ್ರಹ ಮಾಡಿದ್ದ ಕಾಯಿಗಳನ್ನು ಜಟಕದಲ್ಲಿ ಹಾಕಿಸಿ (ಗಂಡಿನ ಕಡೆಯುವರಿಗೆ ಬಂದಿದ್ದ ಕಾಯಿಗಳನ್ನು ಮಾತ್ರ ಕೊಂಡು) ಹೋಗಿ ಪೇಟೆಯಲ್ಲಿ ಮಾರಿಬಂದು ಸಾತಮ್ಮನಿಗೆ "ಕಾಯಿ ತಗೊಂಡು ಹೋಗೋದು ಕಷ್ಟ. ಅದಕ್ಕೇ ಎಲ್ಲ ವನ್ನೂ ಮಾರಿಬಿಟ್ಟೆ" ಎಂದು ಹೆಮ್ಮೆಯಿಂದ ಹೇಳಿಕೊಂಡರು.

ರಾಮನಾಥ ಹೊರಟು ನಿಂತಾಗ ಗಂಡನನ್ನು ಬಹಳ ಕಾಲ ಅಗಲಿರ ಬೇಕಾದ ಸತಿಯಂತೆ ಕಲ್ಯಾಣಿ ಕಣ್ಣೀರು ಸುರಿಸಿದಳು. ರಾಮನಾಥನೂ ಹೆಂಡತಿಯ ಕಣ್ಣೀರು ನೋಡಿ ಕಸಿವಿಸಿಗೊಂಡ. ಅವಳನ್ನು ಆ ಗಳಿಗೆಯೇ ತನ್ನೊಡನೆ ಕರೆದೊಯ್ಯುವ ಆತುರ ತೋರಿಸಿದ.

ಆದರೆ ಸಾತಮ್ಮ ಅದಕ್ಕೆ ಅವಕಾಶ ಕೊಡಲಿಲ್ಲ.

"ಒಂದೇ ವರ್ಷದಲ್ಲಿ ಮೂರು ತಲೆಯಾಗಬಾರದು. ಇನ್ನು ಮೂರು ತಿಂಗಳಾದ ಮೇಲೆ ಕರೆದುಕೊಂಡು ಹೋಗೋಣ" ಎಂದರು ಸಾತಮ್ಮ.

ಅದು ಹೇಗೆ ಮೂರು ತಲೆಯೋ ರಾಮನಾಥನಿಗಂತೂ ಅರ್ಥವಾಗ ಲಿಲ್ಲ. ಆದರೂ ಅವನು ಸುಮ್ಮನಾದ.

ಕೆಲವು ಪೂರ್ವಿಕ ಸಂಪ್ರದಾಯಗಳಲ್ಲಿ ಅವನಿಗೆ ನಂಬಿಕೆ ಇಲ್ಲದಿ ದ್ದರೂ ತಾಯಿಯ ಮನಸ್ಸನ್ನು ನೋಯಿಸಲಾರದೆ ಅವನು ಮೌನವಾಗಿ ಅವರು ಹೇಳಿದುದಕ್ಕೆಲ್ಲಾ ಒಪ್ಪಿಕೊಳ್ಳುತ್ತಿದ್ದ.

ರಾಮನಾಥ ಹೊರಟುಹೋದ ಮೇಲೆ ಕಲ್ಯಾಣಿಗೆ ಜಗತ್ತು ಶೂನ್ಯ ವಾಗಿರುವಂತೆ ತೋರಿತು. ಎರಡು ದಿನಗಳಲ್ಲಿ ಅವಳ ಬಲವನ್ನೆಲ್ಲಾ ಸೂರೆ ಗೊಂಡು ಹೋಗಿದ್ದ ರಾಮನಾಥ.

"ಅವರಿದ್ದಾಗ ಸಮಯ ಹೇಗೆ ಹೋಗ್ತಿತ್ತು ಎನ್ನೋದೇ ತಿಳಿಯು

ತ್ತಿರಲಿಲ್ಲ. ಈಗ ಸಮಯ ಹೋಗುವುದಿಲ್ಲ" ಎಂದು ಕಲ್ಯಾಣಿ ಬೇಸರ ಪಟ್ಟುಕೊಳ್ಳುತ್ತಿದ್ದಳು.

"ಪಗಡೆ ಆಡೋಣ ಬಾರೆ" ಎಂದು ವತ್ಸಲೆ ಕೀಟಲೆಯ ದನಿಯಲ್ಲಿ ನಾದಿನಿಯನ್ನು ಕರೆಯುತ್ತಿದ್ದಳು.

ರಾಮನಾಥ, ಕಲ್ಯಾಣಿ ಒಂದು ಬಾರಿ ಪಗಡೆಯಾಡುತ್ತಿದ್ದುದನ್ನು ವತ್ಸಲೆ ನೋಡಿದ್ದಳು.

ಆದರೆ ರಾಮನಾಥನೊಡನೆ ಪಗಡೆಯಾಡುವುದಕ್ಕೂ, ವತ್ಸಲೆಯೊಡನೆ ಆಡುವುದಕ್ಕೂ ವ್ಯತ್ಯಾಸವಿಲ್ಲವೇ?

ಆ ಸ್ವಾರಸ್ಯ ಇಲ್ಲೆಲ್ಲಿಂದ ಬರಬೇಕು?

ಮಾತಿಗೊಂದು ಮುತ್ತು, ಏಟಿಗೊಂದು ಲಲ್ಲೆಮಾತು, ಸೋತರೊಂದು ಕಾಣಿಕೆ, ಗೆದ್ದರೊಂದು ಅಪ್ಪುಗೆ....

"ಊಹೊಂ. ನಾನು ಬರೋದಿಲ್ಲ" ಎಂದಳು ಕಲ್ಯಾಣಿ.

"ನನ್ನ ಜೊತೆ ಯಾಕಮ್ಮ ಬರ್ತೀಯಾ? ನಿನ್ನ ಗಂಡನ ಜೊತೆ ಬೇಕಾದರೆ ಆಡ್ತೀಯ" ಎಂದು ಕೊಂಕು ನುಡಿದಳು ವತ್ಸಲೆ.

ಕಲ್ಯಾಣಿ ತನ್ನ ರೂಮಿಗೆ ಹೋಗಿ ಪೆಟ್ಟಿಗೆಯಿಂದ ರಾಮನಾಥನ ಭಾವಚಿತ್ರವನ್ನು ತೆಗೆದು ನೋಡತೊಡಗಿದಳು.

ಅವಳನ್ನು ಮರುಳುಗೊಳಿಸಿದ ನಗೆಯ ಚಿತ್ರವದು. ಒಮ್ಮೆ ಕಲ್ಯಾಣಿ ರಾಮನಾಥನಿಗೆ ಹೇಳಿದ್ದಳು.

"ನಾನು ನಿಮ್ಮನ್ನ ಯಾಕೆ ಮದುವೆ ಮಾಡಿಕೊಂಡೆ ಗೊತ್ತಾ?"

"ಊಹೆ ಮಾಡಿ ಹೇಳ್ತೀನಿ."

"ಹೂಂ."

"ವಿದ್ಯಾವಂತ...."

"ಅಲ್ಲ."

"ಸುಮಾರಾಗಿ ಸಂಬಳ ಬರತ್ತೇಂತ......"

"ಅಲ್ಲಾ"

"ಚೆನ್ನಾಗಿದೀನೀಂತ...."

"ಇಷ್ಟೊಂದು ಮುಖಸ್ತುತಿ ಮಾಡಿಕೋಳ್ಳಬಾರದು. ನೀವು ಹೇಳಿದ್ದ

ನ್ನೆಲ್ಲಾ ನಾನೂ ಒಪ್ಪಿಕೊಂಡೆ. ಆದರೆ ನಾನು ಅದಾವುದನ್ನೂ ಮೆಚ್ಚಿ ಕೊಳ್ಳಲಿಲ್ಲ......"

"ಹಾಗಾದರೆ ನನ್ನಲ್ಲಿ ಏನು ಮೆಚ್ಚಿಕೊಂಡೆ....?"

"ನಿಮ್ಮ ನಗು"

ರಾಮನಾಥ ನಕ್ಕ. ನಕ್ಕಾಗ ತುಂಬಾ ಪುಟ್ಟ ಹುಡುಗನಂತೆ ಕಾಣು ತಿದ್ದ ಅವನ ಮುಖವನ್ನು ಕಲ್ಯಾಣಿ ಮುದ್ದಿನಿಂದ ನೋಡಿದ್ದಳು.

"ನಿನ್ನಲ್ಲಿ ನಾನೇನು ಮೆಚ್ಚಿಕೊಂಡೆ ಗೊತ್ತಾ?"

"ಊಹೂಂ. ಹೇಳಿ"

"ನಿನ್ನ ಮೇಕಪ್"

ಮುದ್ದು ಅವಳ ಕಣ್ಣಿನಿಂದ ಮಾಯವಾಗಿ ರೋಷ ಅಲ್ಲಿ ಇಣು ಕಿತು; ಕಲ್ಯಾಣಿ ತಟ್ಟನೆ ಹೊರಗೆ ಹೋದಳು.

"ಚಿನ್ನ! ನನ್ನ ತಬ್ಬಲಿಮಾಡಿ ಹೊರಗೆ ಹೋಗಬೇಡ" ಎಂದು ರಾಮನಾಥ.

"ಅಂತಹ ಚೆನ್ನಾಗಿ ಅಪ್ಪ, ಅಮ್ಮ ಇದಾರೆ....."

"ನೀನು ನನ್ನ ಮೇಲೆ ಕೋಪಿಸಿಕೊಂಡು ಹೋದರೆ ನಾನು ಅನಾಥ."

"ನಿಮಗೆ ನನ್ನ ಕಂಡರೆ ಪ್ರೀತಿಯಿಲ್ಲ"

"ಪ್ರೀತಿ ಇದೇಂತ ತೋರಿಸಲೇನು ?"

ರಾಮನಾಥ ಅವಳ ಬಗ್ಗೆ ತನಗೆ ಪ್ರೀತಿಯಿದೆ ಎಂದು ತೋರಿಸಿದ. ಕಲ್ಯಾಣಿ ಪ್ರಸನ್ನಳಾದಳು.

ಕಲ್ಯಾಣಿಯ ಮುಖದ ಮೇಲೆ ನಸುನಗೆ ಹರಡಿತು.

ತನ್ನ ಗಂಡನಿಗೆ ತನ್ನಲ್ಲಿ ಎಷ್ಟೊಂದು ಪ್ರೀತಿ !

ಬಹುಶಃ ಈ ಜಗತ್ತಿನಲ್ಲಿ ಬೇರೆ ಯಾವ ಗಂಡ ಹೆಂಡಿರೂ ತಾವು ಒಬ್ಬರನ್ನೊಬ್ಬರು ಪ್ರೀತಿಸುವಷ್ಟು ಪ್ರೀತಿಸಲಾರರು.

ರಾಮನಾಥನ ಹೃದಯ ಪ್ರೀತಿಯ ಹುಚ್ಚು ಹೊಳೆ! ತನ್ನದೋ ಜಗತ್ತನ್ನೇ ನುಂಗುವ ಪ್ರಳಯಾಗ್ನಿ.

ಆದರೆ ಅವಳ ಜಗತ್ತು ರಾಮನಾಥ ಮಾತ್ರ. ರಾಮನಾಥನ ಹುಚ್ಚು ಹೊಳೆಯ ಪ್ರವಾಹ ಕಲ್ಯಾಣಿಯ ಕಡೆ ಮಾತ್ರ.

ವತ್ಸಲೆ ರಾಮನಾಥನ ಭಾವಚಿತ್ರವನ್ನು ಕಿತ್ತುಕೊಂಡಾಗ

ಕಲ್ಯಾಣಿಗೆ ಎಚ್ಚರವಾಯಿತು.

"ಕೊಡಿ ಅತ್ತಿಗೆ."

"ಅಷ್ಟೊಂದು ನೋಡಬಾರದು. ದೃಷ್ಟಿಯಾಗತ್ತೆ."

"ನಿಮ್ಮ ದಮ್ಮಯ್ಯ."

"ಹುಂ. ಹೋಗಲಿ ತಗೋ"

ಎನ್ನುತ್ತಾ ವತ್ಸಲೆ ಚಿತ್ರವನ್ನು ಕಲ್ಯಾಣಿಯ ಕೈಗೆ ಕೊಟ್ಟು ನಗುತ್ತಾ ಹೊರಗೆ ಹೋದಳು.

ಈ ಬಗೆಯ ಹುಚ್ಚಾಟ ಅವಳಿಗೆ ತಿಳಿಯದೇ ?

ಅದರಲ್ಲೂ ದಾಂಪತ್ಯ ಜೀವನದಲ್ಲಿ ಕಾಲಿಟ್ಟು ಅಗಲೇ ಏಳೆಂಟು ವರ್ಷ ಕಳೆದಿರುವ ಹಳೆಯ ಹುಲಿ ಅವಳು.

ಮಾರನೆಯ ದಿನದಿಂದಲೇ ಪತ್ರ ವ್ಯವಹಾರ ಮೊದಲಾಯಿತು.

ರಾಮನಾಥ ದಿನಕ್ಕೊಂದು ಕಾಗದ ಬರೆಯುತ್ತಿದ್ದ. ಒಂದೊಂದು ದಿನವಂತೂ ಬೆಳಿಗ್ಗೆ, ಮಧ್ಯಾಹ್ನದ ಎರಡು ಪೋಸ್ಟಿನಲ್ಲೂ ಕಲ್ಯಾಣಿಗೆ ಕಾಗದಗಳು ಬರುತ್ತಿದ್ದವು. ಎಷ್ಟೋ ವೇಳೆ ಹೆಚ್ಚಿಗೆ ಅಂಚೆ ಚೀಟಿ ಅಂಟಿಸಿರುತ್ತಿದ್ದುದೂ ಉಂಟು. ಯಾವ ಕಾಗದವೂ ಎಂಟು-ಹತ್ತು ಪುಟಗಳಿಗೆ ಕಡಿಮೆ ಇರುತ್ತಿರಲಿಲ್ಲ.

ಕಾಗದ ಬಂದ ಕೂಡಲೇ ಕಲ್ಯಾಣಿ ಬಾಗಿಲು ಹಾಕಿಕೊಂಡು ಅದನ್ನುಮನಸ್ಸಿನಲ್ಲಿಯೇ ಓದಿಕೊಳ್ಳುತ್ತಿದ್ದಳು.

ಕೆಲವು ವಾಕ್ಯಗಳಂತೂ ಅವಳ ಕೆನ್ನೆಯನ್ನು ಕೆಂಪಾಗಿಸುತ್ತಿತ್ತು. ಒಮ್ಮೊಮ್ಮೆ

"ಹುಚ್ಚು ಹುಡುಗ ! ಏನೇನೋ ಬರೀತಾರೆ" ಎಂದುಕೊಳ್ಳುತ್ತಿದ್ದಳು.

ಆದರೆ ಆ ಹುಚ್ಚಾಟ ಅವಳಿಗೆ ತುಂಬಾ ಪ್ರಿಯವಾಗಿತ್ತು. ಕಾಗದ ಅರ್ಧ ಓದಿರುವಾಗಲೇ ಕೆಲವು ಸಲ ಕಲ್ಯಾಣಿ ಹೋಗಿ ಕನ್ನಡಿಯ ಮುಂದೆ ನಿಂತು ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಿದ್ದಳು.

"ಅವರು ವರ್ಣಿಸಿರುವಷ್ಟು ನಾನು ಚೆನ್ನಾಗಿದೀನೆಯೇ ?" ಎಂಬ ಪ್ರಶ್ನೆ ಆಗಾಗ್ಗೆ ಅವಳ ಮನಸ್ಸಿನಲ್ಲಿ ಏಳುತ್ತಿತ್ತು.

'....ಗುಲಾಬಿ ಕೆನ್ನೆ....'

ರೂಜ್ ಬಳಿದರೇನೇ ಅದು ಗುಲಾಬಿ ಯಾಗುತ್ತಿತ್ತೆಂಬುದು ಅವಳಿಗೆ ತಿಳಿಯದೆ?

"....ಕೆಂಪು ತುಟಿ...."

ಅಯ್ಯೋ, ಅದು ಬರಿಯ ರಂಗು ಎಂದು ಅವರಿಗೆ ತಿಳಿಯದು.

"....ನಾಗವೇಣಿ...."

ಬರಿಯ ಬೂಟಾಟಿಕೆ. ತನ್ನ ತಲೆಗೂದಲಿನ ಮುಕ್ಕಾಲು ಭಾಗ ಚೌರಿ ಎಂಬುದು ತಿಳಿದಿದ್ದರೂ ತನ್ನನ್ನು ರೇಗಿಸೋಕೆ ಮಾತ್ರ ಹಾಗೆ ಬರೆದಿದಾರೆ. ಅವತ್ತು ಹಾಸ್ಯ ಮಾಡಿರಲಿಲ್ಲವೆ? ಎಲ್ಲಿ?

ಹೂಂ ಉಡುಪಿಯಲ್ಲಿ....

"ತಲೇಲಿ ಕೂದಲೇ ಇಲ್ಲದಿರುವವರಿಗೆ ಯಾಕೆ ಹೆದರಿಕೆ?...."

ತನ್ನ ತಲೆಗೂದಲನ್ನು ಹಾಸ್ಯ ಮಾಡಿದ್ದಕ್ಕಾಗಿ ಕಲ್ಯಾಣಿ ಕೋಪಿಸಿಕೊಂಡು ರಾಮನಾಥನ ಒಂದು ಪತ್ರಕ್ಕೆ ಉತ್ತರವನ್ನೇ ಬರೆಯಲಿಲ್ಲ.

ಮಾರನೆಯ ದಿನ ರಾಮನಾಥನಿಂದ ಒಂದು ಟೆಲಿಗ್ರಾಂ ಬಂತು.

ಬೆಂಗಳೂರಿನಿಂದ ಟೆಲಿಗ್ರಾಂ ಎಂದೊಡನೆ ಮನೆಯವರೆಲ್ಲಾ ಹೆದರಿಬಿಟ್ಟರು. ವಿಜಯಮ್ಮನಂತೂ ಕೈಲಾಸದಲ್ಲಿರುವ ಶಿವನಿಗೂ ಕೇಳುವ ಹಾಗೆ "ನಿಂಗೆ ತುಪ್ಪದ ದೀಪ ಹಚ್ತೀನಿ ನಮ್ಮಪ್ಪ" ಎಂದು ಹೇಳಿಕೊಂಡರು.

ಅನಂತ ಟೆಲಿಗ್ರಾಂ ಒಡೆದು ಓದಿ ನಕ್ಕುಬಿಟ್ಟ.

"ಏನಂತೆ?"

ಎಲ್ಲರೂ ಕಾತರ, ಭಯದಿಂದ ಕೇಳಿದರು.

"ಕಲ್ಯಾಣಿ, ಯಾಕೆ ಕಾಗದ ಬರೆಯಲಿಲ್ಲ? ಕೂಡಲೇ ಬರಿ"

ವೆಂಕಟಾಚಲಯ್ಯನವರು ಸ್ವಲ್ಪ ಬೇಸರದಿಂದ

"ಟೆಲಿಗ್ರಾಂ ಎಂದ ಕೂಡಲೆ ಗಾಬರಿಯಾಯಿತು. ಯಾಕೋ ಇವರದು ಎಲ್ಲಾ ಅತಿಯಾಯಿತು" ಎಂದರು.

"ಸದ್ಯ, ಮೊದಲು ನಿನ್ನ ಗಂಡನಿಗೆ ಕಾಗದ ಬರೆಯಮ್ಮ" ಎಂದರು ವಿಜಯಮ್ಮ.

ಕಲ್ಯಾಣಿಗೆ ಹಿರಿಯರ ಎದುರಿಗೆ ಅವಮಾನವಾದ ಹಾಗಾದರೂ, ತನ್ನ ಗಂಡ ತನ್ನನ್ನು ಎಷ್ಟೊಂದು ಪ್ರೀತಿಸುತ್ತಾನೆ ಎಂದು ತಿಳಿದು

ಹರ್ಷವೂ ಆಯಿತು.

ಗಂಡನ ಮೇಲಿದ್ದ ಮುನಿಸೂ ಕರಗಿತು.

ಕೂಡಲೆ ಅವಳು ಇಪ್ಪತ್ತು ಪುಟಗಳ ಒಂದು ಚಿಕ್ಕ ಕಾಗದವನ್ನು ಗಂಡನಿಗೆ ಬರೆದಳು.

ಅವಳು ಬರೆಯುತ್ತಿದ್ದ ಪೇಜುಗಳನ್ನು ನೋಡಿ ವತ್ಸಲೆ ಕೇಳಿದಳು.

"ಕಾದಂಬರಿ ಬರೀತಿದೀಯೋ ಅಥವಾ ಕಾಗದವೋ?"

"ಹೋಗಿ ಅತ್ತಿಗೆ, ಮಧ್ಯೆ ತೊಂದರೆ ಮಾಡಬೇಡಿ"

"ಅಷ್ಟೊಂದು ಬರೆದಿದೀಯಲ್ಲಾ ಅದೇನು ನೋಡೋಣಕೊಡು."

"ಊಹೂಂ. ಈ ಕಾಗದ ನೀವು ಓದಿದರೆ ಆ ಮೇಲೆ ನಾನು ನಿಮಗೆ ಮುಖ ತೋರಿಸೋಕಾಗೋದಿಲ್ಲ."

"ಹಾಗಾದರೆ ಓದಲೇ ಬೇಕು."

"ಸಾಧ್ಯವೇ ಇಲ್ಲ"

ಎನ್ನುತ್ತಾ ಕಲ್ಯಾಣಿ ಪತ್ರ ಕಾಗದ ಬರೆದು ಮುಗಿಸಿ, ಯಾರಲ್ಲಿಯೂ ನಂಬಿಕೆ ಇಡದೆ ತಾನೇ ಹೋಗಿ ಪೋಸ್ಟ್ ಮಾಡಿ ಬಂದಳು.

ದೇವರ ತಲೆಯ ಮೇಲಿನ ಹೂವು ತಪ್ಪಿದರೂ ರಾಮನಾಥನ ಕಾಗದ ತಪ್ಪುತ್ತಿರಲಿಲ್ಲ. ಅವನಿಂದ ಕಾಗದ ಬಂದ ಕೂಡಲೇ ಕಲ್ಯಾಣಿ ತುಂಬಾ ಗಹನವಾದ ವಿಷಯವನ್ನು ವಿದ್ಯಾರ್ಥಿ ಅಭ್ಯಾಸ ಮಾಡಲು ಬರೆಯುವಂತೆ ಕಾಗದ ಬರೆಯಲು ಕುಳಿತುಕೊಳ್ಳುತ್ತಿದ್ದಳು.

ವಿಜಯಮ್ಮನಿಗೆ ಮಗಳ ಈ ಬಗೆಯ ಆಟ ಹಿಡಿಸಲಿಲ್ಲ.

ಮಗಳು ಸಧ್ಯದಲ್ಲಿಯೇ ಗಂಡನ ಮನೆಗೆ ಹೋಗಲಿರುವವಳು, ಸ್ವಲ್ಪ ಮನೆಗೆಲಸ ಕಲಿತುಕೊಳ್ಳಲಿ ಎಂದು ಅವರಿಗೆ ಆಸೆ. ಆದರೆ ಕಲ್ಯಾಣಿಗೆ ಗಂಡನಿಂದ ಬಂದ ಕಾಗದ ಓದುವುದಕ್ಕೆ, ಮತ್ತೆ ಆತನಿಗೆ ಜವಾಬು ಬರೆಯುವುದಕ್ಕೇ ವಿರಾಮವಿರಲಿಲ್ಲ.

"ಅಡಿಗೆ ಮಾಡೋದು ಕಲಿತುಕೋ. ಅಡಿಗೆ ಮನೆಯೊಳಗೆ ಬಂದು ನಾನು ಮಾಡುವುದನ್ನು ನೋಡಿಕೋ"

ಎಂದು ವಿಜಯಮ್ಮ ಮಗಳಿಗೆ ಹೇಳಿದಾಗ ಕಲ್ಯಾಣಿ

"ನಾನು ಹೋಗುವಾಗ ಅಡಿಗೆಗಳನ್ನೆಲ್ಲಾ ಹೇಗೆ ಹೇಗೆ ಮಾಡೋದು

ಎನ್ನುವುದನ್ನು ವಿವರವಾಗಿ ಬರೆದು ತಿಳಿದುಕೊಂಡು ಹೋಗುತ್ತೀನಿ. ಅಡಿಗೆ ಮಾಡುವಾಗ ಪುಸ್ತಕ ಎದುರಿಗಿಟ್ಟುಕೊಂಡು ಮಾಡ್ತೀನಿ" ಎಂದಳು.

"ಪುಸ್ತಕ ಎದುರಿಗಿಟ್ಟುಕೊಂಡು ಮಾಡಿದ ಯಾವ ಅಡಿಗೆಯೂ ಸರಿಯಾಗೋದಿಲ್ಲ."

"ಒಂದು ದಿನ ಉಪ್ಪು ಹೆಚ್ಚಾಗಬಹುದು. ಇನ್ನೊಂದು ದಿನ ಹುಳಿ ಜಾಸ್ತಿಯಾಗಬಹುದು. ಆದರೆ ಅದರಿಂದ ಯಾರಿಗೂ ಪ್ರಾಣಾಪಾಯ ವಿಲ್ಲವಲ್ಲ."

"ಒಟ್ಟಿನಲ್ಲಿ ನನಗೆ ಕೆಟ್ಟ ಹೆಸರು ತರ್ತೀಯಾ"

ತಾಯಿಯ ಸಮಾಧಾನಕ್ಕಾಗಿ ಕಲ್ಯಾಣಿ ದಿನದ ಸ್ವಲ್ಪ ಭಾಗವನ್ನು ಅಡಿಗೆಯ ಮನೆಯಲ್ಲಿ ಕಳೆಯಬೇಕಾಯಿತು.

ತಾಯಿ ಅಡಿಗೆ ಮಾಡುವಾಗ ಉಪ್ಪು ಕೈಲಿ ಹಿಡಿದು "ತಿಳಿಯಿತೇನೆ? ಇಷ್ಟು...." ಎಂದಾಗ ಕಲ್ಯಾಣಿ.

"ಒಬ್ಬರು ಹೆಚ್ಚಿಗೆ ಬಂದ ದಿನ? ಒಬ್ಬರು ಕಡಿಮೆಯಾದ ದಿನ?" ಎಂದಳು.

ವಿಜಯಮ್ಮ ಸಹನೆಯಿಂದ ಮಗಳಿಗೆ ಎಲ್ಲವನ್ನೂ ತೋರಿಸಿದರು.

ಒಂದು ದಿನ ಕಲ್ಯಾಣಿ ಅಡಿಗೆಯ ಮನೆಯಲ್ಲಿದ್ದಾಗ ಆನಂದ ಕುಣಿಯುತ್ತಾ ಓಡಿಬಂದು ಕಲ್ಯಾಣಿಗೆ,

"ಅತ್ತೆ, ಮಾವ ಬಂದಿದ್ದಾರೆ" ಎಂದ.

ಅಲ್ಲಿಗೆ ಕಲ್ಯಾಣಿ ತನ್ನ ಶಿಕ್ಷಣಕ್ಕೆ ವಿರಾಮ ಕೊಟ್ಟು ಹೊರಗೋಡಿ ಬಂದಳು.

ಹೌದು. ನಿಜವಾಗಿಯೂ ಅವಳ ರಾಮನಾಥ ಬಂದಿದ್ದ!

"ನೀವಾ! ಬರುತ್ತೀನೀಂತ ಕಾಗದವೇ ಬರೆಯಲಿಲ್ಲ?"

"ನಿನಗೆ ಹ್ಯಾಪಿ ಬರ್ತ್‌ಡೇ ಹೇಳೋಕೆ ಬಂದೆ. ಅಲ್ಲದೆ ನಿನ್ನ ಮುದ್ದು ಮುಖ ನೋಡಿ ಆಗಲೇ ಹದಿನೈದು ದಿವಸ ..."

"ಸುಮ್ಮನಿರಿ ನೋಡಿ ನನ್ನ ತಂದೆ ಬಂದರು" ಎಂದು ಕಲ್ಯಾಣಿ ಗಂಡನನ್ನು ಎಚ್ಚರಿಸಿದಳು.

ವೆಂಕಟಾಚಲಯ್ಯ, ವಿಜಯಮ್ಮ, ಅನಂತ ಎಲ್ಲರೂ ಬಂದು ರಾಮ

ನಾಥನನ್ನು ಸ್ವಾಗತಿಸಿದರು.

ಔಪಚಾರಿಕವಾಗಿ ನಾಲ್ಕಾರು ಮಾತುಗಳಾದ ನಂತರ ರಾಮನಾಥ ರೂಮಿಗೆ ಹೋದ. ಕಲ್ಯಾಣಿ ಅವನ ಹಿಂದೆಯೇ ಕಾಫಿ ತೆಗೆದುಕೊಂಡು ಹೋದಳು.

"ಎಷ್ಟು ದಿನವಾಯ್ತು ನಿನ್ನ ನೋಡಿ" ಎಂದ ರಾಮನಾಥ. ಕಲ್ಯಾಣಿ ನಕ್ಕಳು. ಅವಳ ಮುಖದಲ್ಲಿ ಮಿನುಗುತ್ತಿದ್ದ ನಗೆಯಿಂದ ರಾಮನಾಥನ ಆಯಾಸವೆಲ್ಲ ಪರಿಹಾರವಾಯಿತು. ಆ ಮಧುರ ನಗು ಅಳಿಸುವುದಕ್ಕೆ ಮುನ್ನ ರಾಮನಾಥ ಅದನ್ನು ಹೀರಿ ತನ್ನಲ್ಲಿ ಸೆರೆ ಹಿಡಿದ.

"ರಜವಿದೆ ತಾನೆ?"

"ಇವತ್ತು ಭಾನುವಾರ, ನಾಳೆ ನಾನು ಕೆಲಸದ ಮೇಲೆ ಹಾಜರಿರ ಬೇಕು."

"ಹಾಗಾದರೆ...."

"ರಾತ್ರಿ ಗ್ರೈಲಿಗೆ ಹೊರಟುಬಿಡ್ತೀನಿ"

"ನಿದ್ದೆ ಕೆಟ್ಟುಕೊಂಡು?"

"ಊಂ. ಏನು ಮಾಡೋದು? ನಿದ್ದೆಯಲ್ಲೂ ನೀನು ಕಾಡುತ್ತಿದ್ದೆ ಆದುದರಿಂದ."

"ನಾನೇನೂ ಕಾಡ್ತಿರಲಿಲ್ಲ...."

ಕಲ್ಯಾಣಿಗೆ ಅಷ್ಟಕ್ಕೇ ಹುಸಿಗೋಪ. ಕೋಪದಿಂದಾಗಿ ಅಸಮಾಧಾನ ಹೊಗೆಯಾಡಿತು. ರಾಮನಾಥ ಮುದ್ದಿನ ತಂಪಾದ ಜಲವನ್ನೆರೆದು, ಅವಳ ಮುಖವನ್ನು ಪ್ರಸನ್ನಗೊಳಿಸಿದ.

ರಾತ್ರಿಗೆ ರಾಮನಾಥ ಹೊರಡುವವನಾದುದರಿಂದ ಕಲ್ಯಾಣಿ ಅರೆಗಳಿಗೆಯೂ ಅವನನ್ನು ಬಿಟ್ಟಿರಲಿಲ್ಲ. ವಿಜಯಮ್ಮನೂ ಅಳಿಯ ಹೊರಡುವರೆಂದು ಕೇಳಿ ವತ್ಸಲೆಯೊಡನೆ

"ಇದೇನು ಹುಚ್ಚು! ರಾತ್ರಿ ನಿದ್ದೆಗೆಟ್ಟು ಪ್ರಯಾಣಮಾಡುವುದೇ ?" ಎಂದರು.

ವತ್ಸಲೆ ಬದಲು ಹೇಳದೆ ನಸುನಕ್ಕಳು.

ರಾಮನಾಥ ರಾತ್ರಿ ಊರಿಗೆ ಹೊರಟುನಿಂತಾಗ ಕಲ್ಯಾಣಿಯ ಕಣ್ಣು

ಗಳಲ್ಲಿ ನೀರೊಡೆಯಿತು. ರಾಮನಾಥ ಮುಂದಿನ ಭಾನುವಾರ ಮತ್ತೆ ಬರುವುದಾಗಿ ಭಾಷೆ ಕೊಟ್ಟ ನಂತರ ಅವಳಿಗೆ ಕೊಂಚ ಸಮಾಧಾನವಾಯಿತು.

ಮುಂದಿನ ಭಾನುವಾರದವರೆಗೆ ಕಲ್ಯಾಣಿ ರಾಮನಾಥನ ಪ್ರೇಮ ಪತ್ರಗಳನ್ನು ಓದಿ ಸಮಾಧಾನ ಮಾಡಿಕೊಳ್ಳಬೇಕಾಯಿತು. ರಾಮನಾಥ ಶನಿವಾರ ರಾತ್ರಿ ನಿದ್ದೆಗೆಟ್ಟು ಭಾನುವಾರ ಬೆಳಿಗ್ಗೆ ಮೈಸೂರಿನಲ್ಲಿ ಹಾಜರಾದ ಮಡದಿಯ ಮುದ್ದು ಮುಖ ನೋಡಲು.

ಅಳಿಯ ಮಗಳಲ್ಲಿರಿಸಿದ್ದ ಪ್ರೀತಿ, ವಿಶ್ವಾಸ ನೋಡಿ ವಿಜಯಮ್ಮನಿಗೆ ಹಿಗ್ಗಾದರೂ, ಆತ ಒಂದು ದಿನ ಕಲ್ಯಾಣಿಯೊಡನೆ ಕಳೆಯಲು ಎರಡು ರಾತ್ರಿ ನಿದ್ದೆಗೆಟ್ಟು ಆರೋಗ್ಯ ಹಾಳುಮಾಡಿಕೊಳ್ಳುವುದು ಸರಿಯಾಗಿ ತೋರಲಿಲ್ಲ.

ಅಳಿಯ ನಿದ್ದೆಗೆಡುವುದನ್ನು ತಪ್ಪಿಸಬೇಕಾದರೆ ಅವರಿಗುಳಿದಿದ್ದುದು ಒಂದೇ ದಾರಿ. ಮಗಳನ್ನು ಅಳಿಯನೊಡನೆ ಕಳುಹಿಸುವುದರ ಹೊರತು ಬೇರೆ ಮಾರ್ಗ ಅವರಿಗೆ ಕಾಣಲಿಲ್ಲ.

ಹಿರಿಯರಲ್ಲಿ ಪತ್ರ ವ್ಯವಹಾರ ನಡೆದು ಒಪ್ಪಂದವಾಯಿತು.

ಆ ಶುಭ ದಿನ ಹತ್ತಿರ ಬಂತು.

ಯಾವ ದಿನಕ್ಕಾಗಿ ಕಲ್ಯಾಣಿ ಮದುವೆಯಾದಂದಿನಿಂದ ತವಕಿಸುತ್ತಿದ್ದಳೋ ಆ ದಿನ ಹತ್ತಿರಬಂದಾಗ ಅವಳು ನೀರಿನಿಂದ ಹೊರಗೆ ತೆಗೆದ ಮೀನಿನಂತೆ ಚಡಪಡಿಸಿದಳು. ಏನೋ ಒಂದು ಬಗೆಯ ಹೆದರಿಕೆ, ಆತಂಕದಿಂದ ಅವಳು ಕಳೆಗುಂದಿದಳು.

ಯಾಕೆ ಈ ತೊಳಲಾಟ ?

ರಾಮನಾಥನನ್ನು ಕಂಡರೆ ಅವಳಿಗೆ ಪ್ರೀತಿಯಿತ್ತು ನಿಜ. ಅವನಿಗೆ ತನ್ನನ್ನು ಸಂಪೂರ್ಣ ಒಪ್ಪಿಸಿಕೊಂಡ ಹೊರತು ತನ್ನ ಬಾಳು ಪೂರ್ಣವಾಗುವುದಿಲ್ಲವೆಂಬುದೂ ಅವಳಿಗೆ ತಿಳಿದಿತ್ತು. ದಾಂಪತ್ಯ ಜೀವನದ ಬಗ್ಗೆ ಏನೇನೂ ತಿಳಿಯದ ಮುಗ್ಧೆ ಅವಳಾಗಿರಲಿಲ್ಲ.

ಆದರೂ ಏನೋ ಹೆದರಿಕೆ, ಏನೋ ಕಳವಳ. ದಾಂಪತ್ಯ ಜೀವನವನ್ನು ಹಿಂಬಾಲಿಸಿ ಬರುವ ಫಲಿತಾಂಶ ಅವಳಲ್ಲಿ ಭೀತಿಯನ್ನು ಹುಟ್ಟಿಸುತ್ತಿತ್ತು.

ಅಬ್ಬ! ಆ ರಾತ್ರಿ ನೆನೆಸಿಕೊಂಡರೆ? ಅವಳ ಅಕ್ಕ, ಹೆರಿಗೆಗೆಂದು ತವರುಮನೆಗೆ ಬಂದ ಸರೋಜ ಹೇಗೆ ನರಳಿ ಸಂಕಟಪಟ್ಟಿದ್ದಳು? ಆ ಗಳಿಗೆಯಲ್ಲಿ ಕಲ್ಯಾಣಿ ಮನಸ್ಸಿನಲ್ಲಿಯೇ ಪ್ರತಿಜ್ಞೆಮಾಡಿದ್ದಳು—ತಾನು ಕೊನೆಯವರೆಗೂ ಕನ್ಯೆಯಾಗಿಯೇ ಉಳಿಯುವುದಾಗಿ.

ತನ್ನನ್ನು ಹೆಣ್ಣಾಗಿ ನಿರ್ಮಿಸಿದ ಬ್ರಹ್ಮನನ್ನು ಕಲ್ಯಾಣಿ ಶಪಿಸಿದಳು.

ಹೆದರಿಗೆಯಿಂದ ಗಡಗಡನೆ ನಡುಗುತ್ತಾ ಕಲ್ಯಾಣಿ ಆ ರಾತ್ರಿಯನ್ನು ಎದಿರುಗೊಂಡಳು.

ರಾಮನಾಥನಿಗೆ ಅವಳ ಹೆದರಿಕೆ ತೀರ ಅಸಹಜವಾಗಿ ತೋರಿತು. ಸಾಧಾರಣವಾಗಿ ಪ್ರತಿಯೊಬ್ಬ ಹುಡುಗಿಯೂ ತನ್ನ ಮೊದಲ ರಾತ್ರಿಯನ್ನು ಎದುರಿಸಲು ಅಂಜುತ್ತಾಳೆ ಎಂಬುದು ಅವನಿಗೆ ತಿಳಿಯದ ವಿಷಯವಾಗಿತ್ತು. ಗಂಡಿನಷ್ಟೇ ಹೆಣ್ಣು ಪರಸ್ಪರ ಅರ್ಪಣೆಗಾಗಿ ಕಾದಿರುತ್ತಾಳೆ ಎಂದು ಅವನು ತಿಳಿದಿದ್ದ. ಆದರೆ ಹೆಣ್ಣಿನ ಬಯಕೆಯನ್ನು ಭೀತಿ ಕಡಿವಾಣ ಹಾಕಿ ಹಿಂದೆಳೆಯುತ್ತದೆ ಎಂದು ಅವನು ತಿಳಿದಿರಲಿಲ್ಲ.

ಎಂದಿನಂತೆಯೇ ರಾಮನಾಥ ಮೋಹಕ ನಗೆಯೇ ಆ ವಿಷಗಳಿಗೆಯಲ್ಲೂ ಅವಳನ್ನು ಗೆದ್ದು ವಶಪಡಿಸಿಕೊಂಡಿತು.

ಈ ಬಾರಿ ರಾಮನಾಥ ಹೊರಡುವಾಗ ಕಲ್ಯಾಣಿಯನ್ನೂ ತನ್ನೊಡನೆ ಹೊರಡಿಸಿದ. ಸಾತಮ್ಮನಿಗಂತೂ ಸೊಸೆ ತಮ್ಮಲ್ಲಿಗೆ ಬರುವುದು ತುಂಬಾ ಹಿಗ್ಗಿನ ವಿಷಯವಾಗಿತ್ತು.

"ಇನ್ನು ನಮ್ಮೂರಿನಲ್ಲಿ ಒಂದು ಆರತಿ...." ಎಂದು ಆಕೆ ಅಂದಾಜು ಹಾಕುವುದರಲ್ಲಿ ಶೇಷಯ್ಯ,

"ಸಾಕು ಇನ್ನೆಂತಹ ಆರತಿ? ಈ ಊರಿನಲ್ಲಿ ಆದ ಸಂಭ್ರಮ ಸಾಲದೇ?" ಎಂದರು.

"ನಮ್ಮೂರಿನಲ್ಲಿ ನೆಂಟರು, ಸ್ನೇಹಿತರು ಹುಡುಗಿಯನ್ನ ಬಂದು ನೋಡಬೇಡವೇ. ರಾಮ್ಮಣ್ಣನ ಸ್ನೇಹಿತರು...."

"ಅಷ್ಟು ನೋಡಬೇಕೂಂತ ಆಸೆ ಇದ್ದರೆ ಸುಮ್ಮನೆ ಬಂದು ನೋಡಿಕೊಂಡು ಹೋಗ್ತಾರೆ. ಆದಕ್ಯಾಕೆ ಆರತಿ, ಊಟ ಇಟ್ಟುಕೊಳ್ಳಬೇಕು? ಯಾವುದೂ ಬೇಡ."

ಗಂಡನ ಮಾತು ಕೇಳಿ ಸಾತಮ್ಮ ಕಣ್ಣಿನಲ್ಲಿ ನೀರು ತಂದುಕೊಂಡರು.

ಮದುವೆಯಾದಂದಿನಿಂದ ಹಿಡಿದು ಆಕೆ ಅಜ್ಜಿ ಎನಿಸಿಕೊಂಡಿದ್ದರೂ ಗಂಡನ ದರ್ಪ, ಹ ಠ ಮಾ ರಿ ತ ನ, ಜಿಪುಣತನಗಳಿಗೆ ಬಲಿಯಾಗುವುದರ ಹೊರತು ಆಕೆಗೆ ಬೇರೆ ದಾರಿಯೇ ಇರಲಿಲ್ಲ.

ಪುಣ್ಯಕ್ಷೇತ್ರಗಳಿಗೆ ಹೋಗಿ ಪವಿತ್ರಜಲದಲ್ಲಿ ಮಿಂದು ದೇವರ ದರ್ಶನ ಮಾಡಿ ಪಾಪ ಪರಿಹಾರ ಮಾಡಿಕೊಳ್ಳುವ ಉತ್ಕಟ ಅಪೇಕ್ಷೆ ಆಕೆ ಗಿತ್ತು. ಆದರೆ ಹಣ ಖರ್ಚಾಗುವ ಸಂದರ್ಭ ಬಂದರೆ ಶೇಷಯ್ಯ ಖಡಾ ಖಂಡಿತವಾಗಿ 'ಸಾಧ್ಯವಿಲ್ಲ' ಎನ್ನುತ್ತಿದ್ದರು. ತಮ್ಮ ಮನೆಗೆ ಅವಲಕ್ಕಿ ಕುಟ್ಟಲು ಬರುತ್ತಿದ್ದ ಬಡ ಮಡಿ ಹೆಂಗಸೊಬ್ಬಳು ಕಾಶೀಯಾತ್ರೆ ಮಾಡಿ ಬಂದಾಗ ಸಾತಮ್ಮ ಆಕೆಯ ಕಾಲಿಗೆರಗಿ,

"ನೀವೇ ಪುಣ್ಯವಂತರು. ನನಗೆ ಈ ಪುಣ್ಯವಿಲ್ಲ" ಎಂದು ಹೇಳಿದ್ದರು. ಹಾಗೆ ಹೇಳುವಾಗ ಆಕೆಯ ಕಣ್ಣಾಲಿಗಳು ನೀರಿನಲ್ಲಿ ತೇಲುತ್ತಿದ್ದವು. ಆಕೆ ಕೊಟ್ಟ ಕಪ್ಪು ಬಣ್ಣದ ಕಾಶಿದಾರವನ್ನು ಕೈಗೆ ಕಟ್ಟಿಕೊಂಡು,

"ನನಗೆ ಇಷ್ಟೇ ಲಭ್ಯ" ಎಂದು ಸಮಾಧಾನ ಪಡೆದಿದ್ದರು. ಆಕೆಯ ಮೈ ಮೇಲಿನ ಸೀರೆ ಹರಿದು ಮೈ ಕಾಣುವಂತಾದ ಮೇಲೆ ಶೇಷಯ್ಯನವರು ಆಕೆಗೆ ಮತ್ತೆರಡು ಸೀರೆಗಳನ್ನು ತರುತ್ತಿದ್ದರು. ಸೀರೆ ಹರಿದು ಹೋಗಿದೆಯೆಂದು ಗಂಡನಿಗೆ ತಿಳಿಸಲೂ ಆಕೆ ಅಂಜುತ್ತಿದ್ದರು.

ತಮ್ಮ ರಾಮಣ್ಣನ ಕಲ್ಯಾಣಿಯನ್ನು ಮೆರೆಸಬೇಕೆಂಬ ಹಂಬಲದ ಮೇಲೂ ಶೇಷಯ್ಯನವರು ತಣ್ಣೀರು ಎರಚಿದ್ದರು. ರಾಮನಾಥನೇನೋ ಕೈತುಂಬ ಸಂಬಳ ತರುತ್ತಿದ್ದ. ಆಕೆ ಕೇಳಿದರೆ ಆತ ಸಾಕಾಗುವಷ್ಟು ಹಣವನ್ನು ಕೊಡುತ್ತಿದ್ದ. ಆದರೆ ಬಹಳ ವರ್ಷಗಳಿಂದಲೂ ನಕಾರಕ್ಕೆ ಒಗ್ಗಿ ಹೋಗಿದ್ದ ಆಕೆಯ ಜೀವ 'ನನ್ನ ಗಂಡನದೇ ನನಗಿಲ್ಲವಾದ ಮೇಲೆ ಯಾರ ಸಹಾಯವೂ ಬೇಡ' ಎಂದುಕೊಳ್ಳುವ ಮಟ್ಟಕ್ಕೇರಿತ್ತು.

ಕಲ್ಯಾಣಿಗೆ ಒಡವೆ ಮಾಡಿಸುವ ವಿಷಯದಲ್ಲಿ ಮಾತ್ರ ಆಕೆ ಬಾಯಿಬಿಟ್ಟು ರಾಮನಾಥನಲ್ಲಿ ತಮ್ಮ ದುಃಖವನ್ನು ತೋಡಿಕೊಂಡಿದ್ದರು. ಆಗಲೂ ಮಗ ತನ್ನ ಹೆಂಡತಿಗೆ ಮಾಡಿಸಲಿ ಎಂಬ ಉದ್ದೇಶವಿತ್ತೇ ಹೊರತು

ಸ್ವಾರ್ಥವಿರಲಿಲ್ಲ.

ತನ್ನ ಹಂಬಲು, ಆಸೆ ಆಕಾಂಕ್ಷೆಗಳೆಲ್ಲ ವ್ಯರ್ಥವೆನಿಸಿದರೂ ಆಕೆ ಹಂಬಲಿಸುವುದನ್ನು ಬಿಟ್ಟಿರಲಿಲ್ಲ. ಆದರೂ ಗಂಡನಿಂದ ಪ್ರತಿ ಬಾರಿ ತುಳಿಯಲ್ಪಟ್ಟಾಗಲೂ ಆಕೆ ನೊಂದುಕೊಳ್ಳುತ್ತಿದ್ದರು.

ವಿಜಯಮ್ಮ ಮಗಳನ್ನು ನೋವಿನಿಂದ ಕೂಡಿದ ಸಂಭ್ರಮದೊಡನೆ ಗಂಡನೊಡನೆ ಕಳುಹಿಸಿಕೊಟ್ಟರು. ಮಗಳು ಗಂಡನ ಮನೆಗೆ ಹೊರಟು ನಿಂತಾಗ ಆಕೆಯನ್ನು ಪ್ರತ್ಯೇಕವಾಗಿ ಕರೆದು ನಾಲ್ಕಾರು ಬುದ್ಧಿಯ ಮಾತುಗಳನ್ನು ಹೇಳಲು ಆ ತಾಯಿ ಮರೆಯಲಿಲ್ಲ.

"ನಿಂದು ಸ್ವಲ್ಪ ದುಡುಕು ಬುದ್ಧಿ ಕಲ್ಯಾಣಿ. ಯಾವ ಮಾತನ್ನೂ ದುಡುಕಿ ಆಡಬೇಡ. ಸ್ವಲ್ಪ ಯೋಚನೆ ಮಾಡಿ ಮಾತನಾಡು" ಎಂದರಾಕೆ.

"ಬಿಡಮ್ಮ. ನನಗೆ ಅಷ್ಟೂ ತಿಳಿಯೋಲ್ಲವೆ ?" ಎಂದಳು ಮಗಳು. ಕಲ್ಯಾಣಿಗೆ ಗಂಡನ ಮನೆಗೆ ಹೋಗುವ ಸಂಭ್ರಮದಿಂದಾಗಿ ಹರ್ಷ ಹಿಡಿಸದಾಗಿತ್ತು. ತನ್ನ ಬದುಕೆಲ್ಲಾ ಒಂದು ದೊಡ್ಡ ಸುಂದರ ಕನಸೆಂದು ಅವಳು ಭಾವಿಸಿದ್ದಳು.

ದಾಂಪತ್ಯ ಜೀವನದಲ್ಲಿ ಪ್ರೇಮ, ಪ್ರೀತಿಯ ಹೊರತು ಮತ್ತೇನೂ ಇಲ್ಲವೆಂದೇ ಅವಳು ಭಾವಿಸಿದ್ದಳು. ಅವಳು ಬಯಸಿದುದನ್ನು ತಂದು ಮಡಿಲಿಗೆ ಸುರಿಯಲು ರಾಮನಾಥ ತುದಿಗಾಲಿನಲ್ಲಿ ನಿಂತಿದ್ದ. ತಾನು ಬಯಸಿದ ವಸ್ತು, ಪತಿಯ ಪ್ರೀತಿ—ಹೆಣ್ಣಾದವಳಿಗೆ ಇನ್ನೇನು ತಾನೆ ಬೇಕಾಗಿದೆ ?

ಅತ್ತೆಗೆ ಸೊಸೆ ಮನೆಗೆ ಬರುವ ಸಂಭ್ರಮ ಪುನಃ ಪ್ರಾಯವನ್ನು ಬರಿಸಿತ್ತು. ಆಕೆಯ ಹೆಣ್ಣು ಮಕ್ಕಳೆಲ್ಲ ಗಂಡಂದಿರ ಮನೆಗಳಿಗೆ ಹೊರಟು ಹೋದ ಮೇಲೆ, ಬಣ್ಣದ ಸೀರೆಯುಟ್ಟು ಓಡಾಡುವ ಎಳೆಯ ಹೆಣ್ಣು ಜೀವ ಮನೆಯಲ್ಲಿಲ್ಲವಲ್ಲಾ ಎಂದು ಆಕೆ ಕೊರಗುತ್ತಿದ್ದರು. ಆದುದರಿಂದ ಕಲ್ಯಾಣಿಯನ್ನು ಅವರು ಮಗಳೆಂದು ಭಾವಿಸಿದ್ದರೇ ಹೊರತು ಸೊಸೆಯೆಂದು ಭಾವಿಸಿರಲಿಲ್ಲ.

ಮಗಳನ್ನು ಗಂಡನ ಮನೆಗೆ ಕಳುಹಿಸಿಕೊಟ್ಟು ವಿಜಯಮ್ಮ, ವೆಂಕಟಾಚಲಯ್ಯನವರು ನೋವಿನ ನಿಟ್ಟುಸಿರನ್ನು ಬಿಟ್ಟು ನಿಶ್ಚಿಂತರಾದರು. ತಾಯಿ ತಂದೆಯನ್ನು ಬಿಟ್ಟು ಭಾರವಾದ ಹೆಜ್ಜೆ ಹಾಕುತ್ತಾ ಜಟಕವೇರಿ ಕುಳಿತ

ಕಲ್ಯಾಣಿಗೆ ರಾಮನಾಥನ ಮೋಹಕ ನಗೆಯನ್ನು ಕಂಡು ಹೃದಯ ಹಗುರ ವಾಯಿತು.

ಪ್ರತಿದಿನ ಬೆಳಗ್ಗೆ ಏಳು ಗಂಟೆಗೆ ಬರುತ್ತಿದ್ದ ಹಿಂದೂಸ್ತಾನ್ ಏರೋ ಪ್ಲೇನ್ ಫ್ಯಾಕ್ಟರಿಯ ಬಸ್ಸಿನಲ್ಲಿ ರಾಮನಾಥ ಕೆಲಸಕ್ಕೆ ಹೊರಡುತ್ತಿದ್ದ. ಮಧ್ಯಾಹ್ನದ ಊಟವನ್ನು ಆಳೊಬ್ಬ ಬಂದು ಟಿಫಿನ್ ಕ್ಯಾರಿಯರ್‌ನಲ್ಲಿ ಹಾಕಿಟ್ಟಿರುತ್ತಿದ್ದುದನ್ನು ತೆಗೆದುಕೊಂಡು ಹೋಗುತ್ತಿದ್ದ. ರಾಮನಾಥ ಸಂಜೆ ಐದು ಗಂಟೆಗೆ ಫ್ಯಾಕ್ಟರಿಯಿಂದ ಮನೆಗೆ ಮರಳುತ್ತಿದ್ದ.

ಕಲ್ಯಾಣಿಯನ್ನು ಕರೆದುಕೊಂಡು ಬಂದ ಎರಡು ದಿನ ಅವಳನ್ನು ಬಿಟ್ಟಿರಲಾರದೆ ರಾಮನಾಥ ಫ್ಯಾಕ್ಟರಿಗೆ ರಜಕ್ಕೆ ಬರೆದುಕೊಂಡಿದ್ದ. ಅವನೇನೋ ತಿಂಗಳುಗಟ್ಟಳೆ ರಜ ತೆಗೆದುಕೊಳ್ಳಲು ಸಿದ್ಧನಾಗಿದ್ದ. ಆದರೆ ರಜ ಕೊಡುವವರು ಯಾರೂ ಇರಲಿಲ್ಲ.

ಕಲ್ಯಾಣಿ ಗಂಡನ ಮನೆಗೆ ಬಂದ ಎರಡನೆಯ ದಿನ ರಾಮನಾಥ ಬೆಳಿಗ್ಗೆ ಆರು ಗಂಟೆಗೆ ಎದ್ದ. ಪಕ್ಕದಲ್ಲಿ ಮಲಗಿದ್ದ ಕಲ್ಯಾಣಿಯ ಕಡೆ ಅವನು ತಿರುಗಿ ನೋಡಿ ಮುದ್ದಿನಿಂದ ಅವಳನ್ನು ಎಬ್ಬಿಸಿ,

"ಚಿನ್ನ, ನಾನು ಕೆಲಸಕ್ಕೆ ಹೊರಡ್ತೀನಿ" ಎಂದ.

ಕಲ್ಯಾಣಿಯ ನಿದ್ದೆ ಓಡಿಹೋಯಿತು. ಅವಳು ಜಗ್ಗನೆ ಹಾಸಿಗೆಯ ಮೇಲೆ ಕುಳಿತು

"ಊಂ.... ಬೇಡ" ಎಂದಳು.

ರಾಮನಾಥ ನಕ್ಕು ಅವಳ ಗಲ್ಲ ಹಿಡಿದು ಅಲುಗಿಸಿ "ನನ್ನ ಕೆಲಸ ಹೋದರೋ?" ಎಂದ.

"ಒಳ್ಳೆಯದೇ ಆಯಿತು—ಆಗ ನಾವಿಬ್ಬರೂ ಯಾವಾಗಲೂ ಒಟ್ಟಿಗಿರ ಬಹುದು" ಎಂದಳು ಅವನ ಮುದ್ದಿನ ಮಡದಿ.

"ಅನ್ನ ಯಾರು ಹಾಕ್ತಾರೆ?"

"ನಿಮ್ಮ ತಂದೆ"

ರಾಮನಾಥ ನಕ್ಕ. ಕಲ್ಯಾಣಿಯ ಕೈ ಹಿಡಿದು ಅವಳ ಅಂಗೈಯನ್ನು ತನ್ನ ಕೆನ್ನೆಯ ಮೇಲಾಡಿಸಿಕೊಂಡು

"ನೋಡು, ಬೆಳೆ ಎಷ್ಟು ಹುಲುಸಾಗಿದೆ. ಈಗಲೂ ಅಪ್ಪ ಹಾಕಿದ

ಅನ್ನ ಊಟ ಮಾಡಲೇ?" ಎಂದ.

"ನೀವು ಬರೋದು ಎಷ್ಟು ಹೊತ್ತಾಗತ್ತೆ?"

"ಸಂಜೆ ಐದೂಕಾಲು"

"ಅಲ್ಲಿಯವರೆಗೆ ನಾನೇನು ಮಾಡಲಿ?"

"ಅಮ್ಮನಿಗೆ ಕೆಲಸ ಕಾರ್ಯಗಳಲ್ಲಿ ಸಹಾಯ ಮಾಡು. ಅಕ್ಕ ಪಕ್ಕದ ವರೊಡನೆ ಸ್ನೇಹ ಬೆಳಸಿ ಹರಟೆ ಹೊಡಿ. ನಿದ್ದೆ ಮಾಡು. ಅಲಂಕಾರ ಮಾಡಿಕೋ. ಅಷ್ಟರಲ್ಲಿ ನಾನು ಹಾಜರ್"

ಕಲ್ಯಾಣಿ ಎದ್ದಳು.

ರಾಮನಾಥನ ಮುಖಕ್ಷೌರಕ್ಕಾಗಿ ಬಿಸಿ ನೀರು ತಂದಿಟ್ಟು ನಿಂತಳು. ಅವನ ಹಾಸಿಗೆಯನ್ನು ಒದರಿ ಹಾಗೇ ಸುತ್ತಿದಳು. ತಾಯಿ ಅಡಿಗೆ ಮನೆ ಯಲ್ಲಿ ತಯಾರು ಮಾಡಿಟ್ಟಿದ್ದ ತಿಂಡಿ ಕಾಫಿಯನ್ನು ತಂದು ಗಂಡನ ಕೈಗಿ ತ್ತಳು. ತಿಂಡಿಯನ್ನು ತಾನೇ ಗಂಡನಿಗೆ ತಿನ್ನಿಸಿ, ಕಾಫಿ ಕುಡಿಸಿ, ಕ್ರಾಪು ತಿದ್ದಿ, ಮುಖಸವರಿ, ತನ್ನ ಕೆನ್ನೆಗೊತ್ತಿ ಬೆರಳುಗಳಿಂದ ನೆಟಿಕೆ ಬರಿಸಿದಳು.

"ಬರಲಾ?"

ರಾಮನಾಥ ವರ್ಷಗಟ್ಟಲೆ ದೂರ ಹೋಗಲಿರುವ ಪತಿಯಂತೆ ಹೆಂಡತಿಯನ್ನು ನಾಲ್ಕಾರು ಬಾರಿ ಕೇಳಿದ.

"ಹೂಂ"

ಕಲ್ಯಾಣಿಗೆ ದುಃಖ ಒತ್ತರಿಸಿ ಬರುತ್ತಿತ್ತು.

"ಬೇಜಾರು ಮಾಡಿಕೊಳ್ಳಬೇಡ."

"ಇಲ್ಲ. ಆದರೆ ಸಂಜೆ ಬೇಗ ಬರಬೇಕು."

"ಹೂಂ. ಬರಲಾ?"

ರಾಮನಾಥ ಅದೇ ಅಂತ್ಯದರ್ಶನವೋ ಎಂಬಂತೆ ಹೆಂಡತಿಗೆ ಮುದ್ದಿಟ್ಟು ಅವಸರವಸರವಾಗಿ ಹೊರಟುಹೋದ. ಗಂಡ ಹೋದ ಮೇಲೆ ಮನೆ ಬರಿದಾಗಿರುವಂತೆ ಕಲ್ಯಾಣಿಗೆ ತೋರಿತು. ಆಕೆ ಮತ್ತೇನೂ ಮಾಡಲು ತೋರದೆ ಸಾತಮ್ಮನ ಕಡೆ ಹೋದಳು.

ಸೊಸೆ ಮಾಡಿದ ಒಂದೆರಡು ಕೆಲಸಗಳನ್ನು ನೋಡಿದ ಕೂಡಲೇ ಅತ್ತೆಗೆ ಖಾತ್ರಿಯಾಯಿತು—ಸೊಸೆಗೆ ಏನೇನೂ ಮನೆಗೆಲಸ ಮಾಡಲು ಬರು

ವುದಿಲ್ಲವೆಂದು.

ರಾಮನಾಥನ ಕಲ್ಯಾಣಿಯ ಅಜ್ಞಾನವೂ ಆಕೆಗೆ ಮುದ್ದಾಗಿಯೇ ಕಾಣಿಸಿತು. ಆಕೆ ಸೊಸೆಗೆ ಮೊದಲನೆಯ ದಿನ ಪಾತ್ರೆಗಳನ್ನು ಹುಳಿ ಹಾಕುವುದರಿಂದ ಮೊದಲುಗೊಂಡು ಅಕ್ಕಿಯನ್ನೂ, ಕಲ್ಲನ್ನೂ ನೀರಿನಲ್ಲಿ ಜಾಲಿಸಿ ಹೇಗೆ ಬೇರೆ ಮಾಡುವುದೆಂಬುದನ್ನು ತೋರಿಸಿಕೊಟ್ಟರು.

ಬೆಳಿಗ್ಗೆ ಒಂಭತ್ತೂವರೆಗೆ ಊಟ ತೆಗೆದುಕೊಂಡು ಹೋಗುವವನು ಸೈಕಲ್ ಶಬ್ದಮಾಡಿದ. ಸಾತಮ್ಮ ಸಿದ್ಧಗೊಳಿಸಿಟ್ಟಿದ್ದ ಟಿಫಿನ್ ಕ್ಯಾರಿಯರನ್ನು ಕಲ್ಯಾಣಿಯ ಕೈಗೆ ಕೊಟ್ಟರು. ಆಕೆ ಅದನ್ನು ತೆಗೆದುಕೊಂಡು ಹೋಗಿ ಹೊರಬಾಗಿಲಿನ ಬಳಿ ಇರಿಸಿದಳು.

"ಇನ್ನು ನೀನು ಬಾ ಊಟಕ್ಕೆ. ನಿನ್ನ ಗಂಡನಿಗೆ ಹೇಗಿದ್ದರೂ ಊಟಕ್ಕೆ ಕಳಿಸಾಯಿತು."

ಅತ್ತೆ ಸೊಸೆಗೆ ಉಪಚಾರ ಮಾಡಿ ಬಡಿಸಿದರು. ತನ್ನೂಟವಾಗುತ್ತಲೆ ಕಲ್ಯಾಣಿ ಅತ್ತೆಗೆ

"ನೀವೂ ಮಾಡಿಬಿಡಿ" ಎಂದಳು.

"ಅವರನ್ನು ಬಿಟ್ಟು?" ಎಂದು ನಕ್ಕರು ಸಾತಮ್ಮ.

ಆಕೆ ಗಂಡನಲ್ಲಿರಿಸಿದ್ದ ಶ್ರದ್ಧೆಯನ್ನು ಕಂಡು ಕಲ್ಯಾಣಿಗೆ ಆಶ್ಚರ್ಯವಾಯಿತು.

ತಾಯಿಯ ಮನೆಯಲ್ಲಿದ್ದಾಗ ಕಲ್ಯಾಣಿ ಬೇಸರವಾದಾಗಲೆಲ್ಲಾ ಹೊತ್ತುಗೊತ್ತೆನ್ನದೆ ಸ್ನೇಹಿತೆಯರ ಮನೆಗೆ ಹೋಗುತ್ತಿದ್ದಳು. ಆದರೆ ಇಲ್ಲಿ ಪರಿಚಯದವರು ಯಾರೂ ಇರಲಿಲ್ಲ.

ಅರ್ಧಗಂಟೆ ಕಳೆಯುವುದರೊಳಗೆ ಸಾತಮ್ಮನ ಹಲವರು ಸ್ನೇಹಿತೆಯರು, ಕುಮಾರ್ತೆಯರು ಕಲ್ಯಾಣಿಯನ್ನು ನೋಡುವ ಸಲುವಾಗಿ ಬಂದರು.

ಅಂದು ಶುಕ್ರವಾರವಾದುದರಿಂದ ಕಲ್ಯಾಣಿ ಎರೆದುಕೊಂಡು ಅತ್ತೆಯ ಆಗ್ರಹಕ್ಕಾಗಿ ಕಡ್ಡಿಯಂಚಿನ ಕಪ್ಪು ರೇಷ್ಮೆಯ ಸೀರೆಯನ್ನು ಉಟ್ಟಿದ್ದಳು.

ಬಂದವರನ್ನು ಸಾತಮ್ಮ ಸ್ವಾಗತಿಸಿದರು. ಹಿರಿಯರ ಕಾಲಿಗೆ ಕಲ್ಯಾಣಿಯಿಂದ ನಮಸ್ಕಾರಮಾಡಿಸಿದರು.

ಇಡೀ ಸ್ತ್ರೀ ಸಮುದಾಯದಲ್ಲಿ ಹಿರಿಯರಾರನ್ನೂ ಲೆಕ್ಕಿಸದೆ ಒಂದೇ

ಸಮನೆ ಬಂದಾಗಿನಿಂದ ಹಿಡಿದು ಹೋಗುವವರೆಗೆ ಹರಟುತ್ತಿದ್ದ ಶಾರದೆ ಮೊದಲು ಕಲ್ಯಾಣಿಯ ಗಮನವನ್ನು ಸೆಳೆದಳು.

ಶಾರದೆ ಬಲು ಬೇಗ ತನ್ನ ಮಾತುಗಾರಿಕೆಯಿಂದ ಎಲ್ಲರ ಸ್ನೇಹ ಮಾಡಿಬಿಡುತ್ತಿದ್ದಳು. ಅಷ್ಟೇ ಬೇಗ ಅವರ ಸ್ನೇಹವನ್ನೂ ಕಳೆದುಕೊಳ್ಳುತ್ತಿದ್ದಳು—ತನ್ನ ಅತಿ ಮಾತಿನಿಂದಾಗಿ.

ಅವಳ ಪರಿಚಯವಿದ್ದವರು ಅವಳನ್ನು ಕಂಡರೆ ಮಾತಿಗೆ ಹೆದರಿ ಮುಖ ತಿರುಗಿಸಿಕೊಂಡು ಹೋಗುತ್ತಿದ್ದರು.

ಕಲ್ಯಾಣಿ ತನ್ನ ಸಮವಯಸ್ಕಳಾದ ಶಾರದೆಯೊಡನೆ ಬಹು ಬೇಗ ಗೆಳೆತನವನ್ನು ಬೆಳಸಿದಳು. ಒಂದು ಗಂಟೆಯಲ್ಲಿ ಶಾರದೆ ಕಲ್ಯಾಣಿಯ ಪೂರ್ವೇತಿಹಾಸ, ಮದುವೆಯಾದ ಬಗೆ, ಮದುವೆಯಲ್ಲಿ ಬಂದ ಉಡುಗೊರೆಗಳು ಎಲ್ಲವನ್ನೂ ವಿಶದವಾಗಿ ಕೇಳಿ ತಿಳಿದುಕೊಂಡಳು. ಸುಮಾರು ಒಂದು ಗಂಟೆಯಲ್ಲಿ ಶಾರದೆ ಕಲ್ಯಾಣಿಯನ್ನು ಸಂಪೂರ್ಣ ತನ್ನ ವಶಮಾಡಿಕೊಂಡಳು. ಮುಂದಿನ ಅರ್ಧ ಗಂಟೆಯಲ್ಲಿ ಕಲ್ಯಾಣಿಗೆ ಅವಳು ಮಾತು ನಿಲ್ಲಿಸಿದರೆ ಸಾಕೆನಿಸಿ ಆಕಳಿಸತೊಡಗಿದಳು. ಕೊನೆಗೆ ಶಾರದೆ ಹೋದರೆ ಸಾಕೆನಿಸಿತು ಕಲ್ಯಾಣಿಗೆ.

ಶಾರದೆಗೆ ಒಂದು ಚಾಳಿಯಿತ್ತು. ಆಕೆ ಪುರಾಣದ ಕತೆಗಳು, ಭಾರತ, ರಾಮಾಯಣ, ಕಾಳಿದಾಸನ ಕೃತಿಗಳನ್ನು ಚೆನ್ನಾಗಿ ಓದಿಕೊಂಡಿದ್ದಳು. ಸಮಯ, ಸಂದರ್ಭ ಯಾವುದನ್ನೂ ಲೆಕ್ಕಿಸದೆ ಅವಳು

"ಕಾಳಿದಾಸ ಕುಮಾರ ಸಂಭವದಲ್ಲಿ ಪಾರ್ವತಿಯನ್ನು ಹೀಗೆ ವರ್ಣಿಸುತ್ತಾನೆ" ಎಂದು ಆ ಪದ್ಯವನ್ನು ಪೂರ್ತಿ ಹೇಳಿ ಮುಗಿಸುತ್ತಿದ್ದಳು.

ಕಲ್ಯಾಣಿಯ ಸಹನೆಯ ಕಟ್ಟು ಸಡಿಲವಾಗುತ್ತಾ ಬಂತು. ತಾನು ಇನ್ನು ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತಿದ್ದರೆ ಹುಚ್ಚಿಯಂತೆ ಕೂಗಿಬಿಡಬಹುದೆಂದು ಅಂಜಿ,

"ನಿದ್ದೆ ಬರ್‍ತಿದೆ" ಎಂದವಳೇ ಎದ್ದು ಹೊರಟುಹೋದಳು. ಸಂಜೆ ನಾಲ್ಕು ಗಂಟೆಯ ವೇಳೆಗೆ ಕಲ್ಯಾಣಿ ರಾಮನಾಥನನ್ನು ಎದಿರುಗೊಳ್ಳಲು ಅಲಂಕರಿಸಿಕೊಳ್ಳತೊಡಗಿದಳು.

ಅವನು ಬರುವುದಕ್ಕೆ ಕಾಲು ಗಂಟೆ ಮುಂಚಿತವಾಗಿ ಬೀದಿಯ ಬಾಗಿ

ಲಿನಲ್ಲಿ ಕಲ್ಯಾಣಿ ಬಂದು ನಿಂತಳು.

ಅವಳಿಗೆ ಯುಗವಾಗಿರಬಹುದೆನಿಸಿದಾಗ ರಾಮನಾಥ ಬಾಗಿಲಿನಲ್ಲಿ ಪ್ರತ್ಯಕ್ಷನಾದ.

"ಬಂದಿರಾ?" ಎಂದಳು ಕಲ್ಯಾಣಿ.

ರಾಮನಾಥ ಅವಳು ತನಗಾಗಿ ಶೃಂಗರಿಸಿಕೊಂಡಿರುವುದನ್ನು ಕಣ್ಣು ತುಂಬಾ ನೋಡಿದ.

"ಛಾರ್ಮಿಂಗ್....ಛಾರ್ಮಿಂಗ್" ಎಂದ.

"ನಾನೋ ನನ್ನ ಅಲಂಕಾರವೋ ?"

"ಎರಡೂ."

"ತಿಂಡಿ ತರ್ತೀನಿ ತಾಳಿ" ಎನ್ನುತ್ತಾ ಕಲ್ಯಾಣಿ ಅಡಿಗೆಯ ಮನೆಗೆ ಓಡಿಹೋದಳು. ತಮ್ಮಿಬ್ಬರ ತಿಂಡಿ, ಕಾಫಿಯನ್ನೂ ರೂಮಿಗೇ ತೆಗೆದು ಕೊಂಡು ಬಂದಳು.

ಅಡಿಗೆಯ ಮನೆಯಲ್ಲಿ ಅತ್ತೆಯ ಎದುರಿಗೆ ಯಾವ ಆಟ, ಸರಸ, ವಿನೋದವೂ ಇಲ್ಲದೆ ತಿನ್ನುವುದು ಕಲ್ಯಾಣಿಗಾಗಲಿ, ರಾಮನಾಥನಿಗಾಗಲಿ ಇಷ್ಟವಿರಲಿಲ್ಲ.

ತಿಂಡಿ ತಿನ್ನುವ ಪ್ರಕರಣವಂತೂ ಮುಗಿಯುವಂತೆಯೇ ಇರಲಿಲ್ಲ. ಕೊನೆಗೆ ರಾಮನಾಥ.

"ಬಾರೆ ಎಲ್ಲಾದರೂ ಹೋಗಿ ಬರೋಣ" ಎಂದ.

"ಕ್ಲಬ್ಬು?"

"ನೀನಿರುವಾಗ ಕ್ಲಬ್ಬು ಯಾಕೆ? ಇನ್ನು ಮೇಲೆ ಕ್ಲಬ್ಬಿನ ಸದಸ್ಯತ್ವಕ್ಕೆ ರಾಜೀನಾಮೆ ಬರೆದು ಕಳಿಸಿಬಿಡುತ್ತೇನೆ."

ಕಲ್ಯಾಣಿ, ರಾಮನಾಥ ಹೊರಗೆ ತಿರುಗಾಡಿಕೊಂಡುಬರಲು ಹೋದರು. ಅವರು ವಾಪಸು ಹಿಂತಿರುಗಿ ಬರುವಾಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ಕಲ್ಯಾಣಿಯ ಕೈಯಲ್ಲಿ ಒಂದು ಕುಚ್ಚು ಹೂವು ತೂಗಾಡುತ್ತಿತ್ತು. ರಾಮನಾಥನ ಕೈಲಿ ಒಂದೆರಡು ಹೋಟಲು ತಿಂಡಿಯ ಪೊಟ್ಟಣಗಳಿದ್ದವು.

ಶೇಷಯ್ಯನವರು "ಅನ್ಯಾಯವಾಯಿತು ದುಡ್ಡು. ಹೂವಿಗೆ ದುಡ್ಡು ಹಾಕೋದು ದಂಡ. ಮನೆಯಲ್ಲಿ ಸಂಪಿಗೆ ಹೂವು ಬಿಡತ್ತೆ. ಅದನ್ನ

ಮುಡಿದುಕೊಳ್ಳಬಾರದೆ? ಆ ಜಾಜಿ ಹೂವು...."

"ಸಂಪಿಗೆ ಹೂವು ಮುಡಿದರೆ ಜಾಜಿ ಹೂವು ಮುಡಿದ ಹಾಗೆ ಆಗಲಿಲ್ಲ" ಎಂದ ರಾಮನಾಥ.

"ಹುಡುಗರ ಆಸೆಗಳಿಗೆ ನೀವ್ಯಾಕೆ ಭಂಗ ತರ್ತೀರಿ" ಎಂದರು ಸಾತಮ್ಮ.

ಬೆಳೆದು ನಿಂತ ಮಗ, ಆದರಲ್ಲೂ ಹೆಂಡತಿ ಮನೆಗೆ ಬಂದ ಮೇಲೆ ಅವನು ಸಂಪಾದಿಸಿದ ಹಣವನ್ನು ಖರ್ಚು ಮಾಡಬೇಡವೆಂದು ಒತ್ತಿ ಹೇಳುವುದು ಯಾವ ತಂದೆಗೆ ಸಾಧ್ಯವಿದೆ?

ಶೇಷಯ್ಯನವರು ಒಳಗೊಳಗೇ ಅಸಮಾಧಾನದಿಂದ ಕುದ್ದು ಸುಮ್ಮ ನಾದರು.

ರಾಮನಾಥ, ಕಲ್ಯಾಣಿ ಹೋಟಲಿನ ತಿಂಡಿ ತಿಂದು ಊಟ ಬೇಡ ವೆಂದರು. ಆದರೆ ಸಾತಮ್ಮನವರ ಬಲವಂತಕ್ಕೆ ಅವರು ಊಟದ ಶಾಸ್ತ್ರ ಮಾಡಿ ಎದ್ದರು.

ರಾಮನಾಥ ಅಂದಿನ ವೃತ್ತಪತ್ರಿಕೆಯನ್ನೇ ನೋಡಿರಲಿಲ್ಲ. ಅವನು ಮಂಚವೇರಿ ಕುಳಿತಿದ್ದ ಕಲ್ಯಾಣಿಯ ಕಡೆ ತಿರುಗಿ,

"ಮಲಗಿರು ಚಿನ್ನ. ಪೇಪರೋದಿ ಬರುತ್ತೇನೆ" ಎಂದ.

ಆದರೆ ಅವಳ ಮುಖದಲ್ಲಿ ಮೂಡಿದ ಆಹ್ವಾನ ಕಂಡು ರಾಮನಾಥ ಪೇಪರೆತ್ತಿ ಒಗೆದ.

ಭಾನುವಾರದ ದಿವಸಗಳಲ್ಲಂತೂ ನೂತನ ದಂಪತಿಗಳಿಗೆ ಸ್ವಲ್ಪವೂ ಬಿಡುವಿರುತ್ತಿರಲಿಲ್ಲ. ಭಾನುವಾರ ರಾಮನಾಥ ಎಂಟು ಗಂಟೆಗೆ ಮುಂಚೆ ಏಳುತ್ತಿರಲಿಲ್ಲ. ಅನಂತರ ಕಾಫಿ, ತಿಂಡಿ ಮುಗಿಸಿ ಎಣ್ಣೆಯ ನೀರು ಹಾಕಿ ಕೊಳ್ಳುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡು ಗಂಟೆಯಾಗಿಬಿಡುತ್ತಿತ್ತು. ಆದಾದ ನಂತರ ಊಟ, ನಿದ್ದೆ. ಸಂಜೆ ಟೀ ಕುಡಿದು ಯಾವುದಾದರೂ ಚಿತ್ರಮಂದಿರಕ್ಕೋ, ಇಲ್ಲವೇ ಗೆಳೆಯರ ಮನೆಗೋ ಭೇಟಿ ಕೊಡುತ್ತಿದ್ದರು.

ಭಾನುವಾರದ ದಿವಸ ತನ್ನ ಗೆಳೆಯರ ಮನೆಗೆ ಹೆಂಡತಿಯನ್ನು ಕರೆ ದೊಯ್ಯುವಾಗಲಂತೂ ರಾಮನಾಥ ಅವಳಿಗಿಂತಲೂ ಹೆಚ್ಚು ಆಕೆಯ ಅಲಂಕಾರದಲ್ಲಿ ಆಸಕ್ತಿಯನ್ನು ವಹಿಸುತ್ತಿದ್ದ.

ಗೆಳೆಯರು ತನ್ನ ಮಡದಿಯನ್ನು ಮೆಚ್ಚಬೇಡವೇ?

ಮಗ, ಸೊಸೆಯ ತಿರುಗಾಟವನ್ನು ಕಂಡು ಶೇಷಯ್ಯನವರು ಒಂದೊಂದು ದಿನ ಬೇಸರಪಟ್ಟುಕೊಳ್ಳುತ್ತಿದ್ದರು.

"ಭಾನುವಾರ ಬಂದರಂತೂ ಒಬ್ಬರೂ ಮನೆಯೇ ಸೇರೋದಿಲ್ಲ. ಮನೇಲಿದ್ದರೂ ಅದೇನು ನಿದ್ದೆ ಮಾಡಾಟ...."

ವಯೋಗುಣಕ್ಕನುಸಾರವಾಗಿ ಶೇಷಯ್ಯನವರಿಗೆ ರಾತ್ರಿಯೂ ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ. ಅಂತಹದರಲ್ಲಿ ಮಗ, ಸೊಸೆ ಮಧ್ಯಾಹ್ನವೂ ಅಚ್ಚುಕಟ್ಟಾಗಿ ನಿದ್ದೆ ಮಾಡುವುದನ್ನು ಕಂಡಾಗ ಅವರಿಗೆ ಅಸೂಯೆಯಾಗುತ್ತಿತ್ತು.

ಸಾತಮ್ಮನವರಿಗೆ ಗಂಡ ಅಕಾರಣವಾಗಿ ಮಗನ ಮೇಲೆ ಕೋಪ ಮಾಡಿಕೊಳ್ಳುವ ಮೂಲ ಕಾರಣ ತಿಳಿದಿತ್ತು.

ಕಲ್ಯಾಣಿ ಮನೆಗೆ ಬಂದ ಮೇಲೆ ರಾಮನಾಥ ಧಾರಾಳವಾಗಿ ಹಣ ಖರ್ಚು ಮಾಡುತ್ತಿದ್ದ.

ಮನೆಯಿಂದ ಹೊರಗೆ ಹೊರಡಬೇಕಾದರೆ ಜಟಕ. ಹೊರಗಿನಿಂದ ಮನೆಗೆ ಬರುವಾಗ ಹೂವು, ಬಗೆಬಗೆಯ ತಿಂಡಿಗಳು, ಷಾಪಿಂಗಿಗೆ ಹೋಗಿ ಬಂದಾಗ ಅವಳಿಗೆ ಹೊಸ ಬಟ್ಟೆಗಳು, ಸಮಯ ಸಿಕ್ಕಿದಾಗಲೆಲ್ಲಾ ಸಿನಿಮ....

ಒಂದೇ ಎರಡೇ ಅವನ ಖರ್ಚು!

ಒಮ್ಮೆ ಕಲ್ಯಾಣಿ ತನ್ನ ಪರ್ಸಿನಿಂದ ತೆಗೆದು ಬಿಸಾಡಿದ್ದ ಅರ್ಧ ಟಿಕೇಟನ್ನು ಶೇಷಯ್ಯನವರು ಕೈಗೆತ್ತಿಗೊಂಡು ನೋಡಿದರು. ನೋಡಿ ಅವರ ಎದೆಯೊಡೆಯಿತು.

ಒಂದು ರೂಪಾಯಿ ಹದಿನಾಲ್ಕಾಣೆಯ ಟಿಕೇಟದು. ಹೋಗುವಾಗ, ಬರುವಾಗ ಆಟೋರಿಕ್ಷಾ. ಅಲ್ಲಿ ತಿನ್ನಲು ಐಸ್‌ಕ್ರೀಮ್, ಸೋಡಾ ಕ್ರಷ್....ಏನಿಲ್ಲವೆಂದರೂ ಒಂದು ಸಿನಿಮಾಗೆ ಗಂಡ ಹೆಂಡಿರಿಂದಾಗಿ ಏಳೆಂಟು ರೂಪಾಯಿಗಳ ಖರ್ಚು!

ಆ ದಿನ ಶೇಷಯ್ಯನವರಿಗೆ ಅನ್ನ ಸಹಿತ ಸೇರಲಿಲ್ಲ. ಹೆಂಡತಿ ಮನೆಗೆ ಬರುವುದಕ್ಕೆ ಮುನ್ನ ರಾಮನಾಥನಿಗೆ ಸಿನಿಮಾ ನೋಡುವ ಹುಚ್ಚು ಅಷ್ಟಿರಲಿಲ್ಲ. ಯಾವಾಗಲಾದರೂ ಒಂದೊಂದು ಸಲ, ಅದೂ ಗೆಳೆಯರ ಬಲವಂತ

ದಿಂದಾಗಿ ಹೋಗುತ್ತಿದ್ದ. ಆದರೆ ಕಲ್ಯಾಣಿಗೆ ಚಲನಚಿತ್ರಗಳ ಹುಚ್ಚು ಬಲವಾಗಿತ್ತು. ಅವಳಿಂದಾಗಿಯೇ ಮಗ ಕೆಡುತ್ತಿದ್ದಾನೆಂದು ಶೇಷಯ್ಯನವರು ದೃಢವಾಗಿ ನಂಬಿದ್ದರು. ಅವರು ತಮ್ಮ ಕೋಪವನ್ನೆಲ್ಲಾ ಸಾತಮ್ಮನವರ ಮುಂದೆ ಕಾರಿ ಸುಮ್ಮನಾಗುತ್ತಿದ್ದರು.

"ಬೇಕಾದರೆ ಲೆಕ್ಕ ಹಾಕಿ ಹೇಳ್ತೀನಿ–ಈ ಆರು ತಿಂಗಳಲ್ಲಿ ರಾಮಣ್ಣ ಆರು ವರ್ಷಗಳಲ್ಲಿ ಮಾಡಬಹುದಾದ ಖರ್ಚನ್ನು ಮಾಡಿದ್ದಾನೆ" ಎಂದು ಉರಿದುಬಿದ್ದರು ಶೇಷಯ್ಯ.

"ಕಲ್ಯಾಣಿ ನಮ್ಮ ಮನೆಗೆ ಬಂದು ಆರು ತಿಂಗಳಾಯಿತೇ?" ಸಾತಮ್ಮನವರಿಗೆ ಆಶ್ಚರ್ಯ.

"ಎಷ್ಟು ಬೇಗ ದಿನ ಕಳೆದುಹೋಯಿತು. ರಾಮಣ್ಣನ ಮದುವೆ ಇನ್ನೂ ನಿನ್ನೆ ಮೊನ್ನೆ ನಡೆದ ಹಾಗಿದೆ...."

"ಖರ್ಚಿನ ಬಾಬ್ತು...."

"ಅಯ್ಯೋ ಬಿಡೀಂದ್ರೆ. ಅವನ ಸಂಪಾದನೆ ಏನಾದರೂ ಮಾಡಿಕೊಳ್ಳಲಿ. ನಾಳೆ ಎರಡು ಮಕ್ಕಳಾದರೆ ತಾನಾಗಿಯೇ ಕೈ ಹಿಡಿತ ಮಾಡ್ತಾನೆ."

"ಆ ಮಹಾತಾಯಿ ಅದಕ್ಕೆ ಅವಕಾಶ ಕೊಡಬೇಕಲ್ಲ?"

"ಅದು ಹುಡುಗಿ. ಇವತ್ತು ಉಟ್ಟುತೊಡುವ ಆಸೆ ಇದೆ. ನಾಳೆ ತಾಯಿಯಾದರೆ ಆ ಆಸೆಗಳೆಲ್ಲ ಮಾಯವಾಗಿ ಬಿಡುತ್ತವೆ."

"ನನಗಂತೂ ನಂಬಿಕೆಯಿಲ್ಲ."

"ನೀವು ಯಾವುದೂ ಕಾಣದೆ ಇದ್ದವರ ಹಾಗೆ ಇದ್ದುಬಿಡಿ" ಎಂದು ಮಾತು ಮುಗಿಸಿದರು ಸಾತಮ್ಮ.

ಆದರೆ ರಿಟೈರಾಗಿ ಮನೆಯಲ್ಲಿಯೇ ಇರುತ್ತಿದ್ದ ಶೇಷಯ್ಯನವರು ಕಣ್ಣು ಮುಚ್ಚಿ ಕೂಡುವುದು ಸಾಧ್ಯವೇ?

ಒಂದು ಸಂಜೆ ರಾಮನಾಥ ಫ್ಯಾಕ್ಟರಿಯಿಂದ ಮನೆಗೆ ಬರುವಷ್ಟರಲ್ಲಿ ಕಲ್ಯಾಣಿ ಅಲಂಕರಿಸಿಕೊಂಡು ಹೊರಗೆ ಹೊರಡಲು ಸಿದ್ಧಳಾಗಿ ನಿಂತಿದ್ದಳು. ರಾಮನಾಥ ಹೆಂಡತಿಯನ್ನು ನೋಡಿ

"ಎಲ್ಲಿಗೆ ಅಮ್ಮಾವರ ಪ್ರಯಾಣ?" ಎಂದ.

"ಸ್ವಲ್ಪ ಉಲ್ಲನ್ ತರಬೇಕಾಗಿತ್ತು...."

"ಅಂತಹ ಪ್ರಮೇಯ ಏನೂ ಕಾಣಲಿಲ್ಲವಲ್ಲಾ" ಎನ್ನುತ್ತಾ ರಾಮನಾಥ ಅರ್ಥಗರ್ಭಿತವಾಗಿ ನಕ್ಕ.

"ನಿಮ್ಮ ಹುಡುಗಾಟಿಕೆ ಸಾಕು. ಬೇಗ ಏಳಿ."

"ಕ್ಷಮಿಸು ಚಿನ್ನ. ಇವತ್ತು ನನ್ನ ಸ್ನೇಹಿತನೊಬ್ಬನಿಗೆ ಅವನ ಜೊತೆ ತಿರುಗಾಡಲು ಬರುವುದಾಗಿ ಮಾತು ಕೊಟ್ಟಿದೀನಿ."

"ಊಂ....ನನಗಿಂತಲೂ ನಿಮಗೆ ಆ ಸ್ನೇಹಿತನೇ ಹೆಚ್ಚಾದನೇನೋ?" ಎಂದಳು ಹೆಂಡತಿ ಆಕ್ಷೇಪಣೆಯ ದನಿಯಲ್ಲಿ.

"ಇವತ್ತೊಂದು ದಿನ ...ಒಂದೇ ಒಂದು ದಿನ...." ರಾಮನಾಥ ಅವಳ ಸಮ್ಮತಿಯನ್ನು ಯಾಚಿಸಿದ.

"ಹೂಂ. ಹೋಗಿ."

"ನೀನೇನ್ಮಾಡ್ತಿಯಾ ? ಇಷ್ಟೊಂದು ಅಲಂಕಾರ...."

"ನಾನು ಶಾರದನ ಜೊತೆ ಮಾರ್ಕೆಟ್ಟಿಗೆ ಹೋಗಿ ಬರ್ತೀನಿ"

ಅವಳ ಮಾತು ಕೇಳಿ ಅವನಿಗೆ ಕೊಂಚ ನಿರಾಶೆಯಾಯಿತು.

"ನೀವು ಬಾರದಿದ್ದರೆ ನಾನು ಎಲ್ಲೂ ಹೋಗೋದಿಲ್ಲ. ಮನೇಲೇ ಇರ್ತೀನಿ" ನಾಳೆ ಹೋಗೋಣ. ಎಂದು ಅವಳು ಹೇಳುವಳೇನೋ ಎಂದು ರಾಮನಾಥ ನಿರೀಕ್ಷಿಸಿದ್ದ.

"ಹೋಗಿ ಬಾ. ಹಣ ಬೇಕಾಗಿತ್ತೇನು?"

"ಹೂಂ. ಮತ್ತೆ ಅಂಗಡಿಯವನು ನಮ್ಮ ಚಿಕ್ಕಪ್ಪನ ಮಗ ಎಂದುಕೊಂಡಿರಾ ?"

ರಾಮನಾಥ ಅವಳು ಕೇಳಿದಷ್ಟು ಹಣವನ್ನು ಕೊಟ್ಟು ಬಟ್ಟೆ ಹಾಕಿಕೊಂಡು ಗೆಳೆಯನನ್ನು ಹುಡುಕಿಕೊಂಡು ಹೋದ. ಕಲ್ಯಾಣಿ ಶಾರದೆಯ ಮನೆಗೆ ಹೋದಳು.

ಮನೆಗೆ ಹಿಂತಿರುಗಿ ಬಂದ ಕಲ್ಯಾಣಿಯ ಕೈಯಲ್ಲಿ ದೊಡ್ಡ ಪೊಟ್ಟಣವಿತ್ತು. ಅವಳ ಎಡಗೈಲಿ ಹೂವಿನ ಕುಚ್ಚು. ಅವಳು ಮನೆಗೆ ಬಂದ ಸ್ವಲ್ಪ ಹೊತ್ತಿಗೆ ರಾಮನಾಥನೂ ಹೂವಿನ ಕುಚ್ಚನ್ನು ತೂಗಾಡಿಸುತ್ತಾ ಮನೆಗೆ ಬಂದ. ಅವನ ಕೈ ನೋಡುತ್ತಲೇ ಕಲ್ಯಾಣಿ.

"ನೀವೂ ತಂದಿರಾ?" ಎಂದಳು.

"ಏನ್ನ? ಹೂವನ್ನೇ? ಹೂಂ. ಹೂವು ನೋಡಿದ ಕೂಡಲೆ ನಿನ್ನ ನೆನಪಾಯಿತು."

"ನಾನೂ ತಂದಿದ್ದೇನೆ."

ರಾಮನಾಥ ಒಂದು ಕ್ಷಣ ಸುಮ್ಮನಿದ್ದು "ಚಿಂತೆಯಿಲ್ಲ. ತುಂಬಾ ಹೂವು ಮುಡಿದುಕೊಂಡುಬಿಡು" ಎಂದ.

ಹಿಂದಿನ ದಿನ ಹೆಂಡತಿಗೆ ಸ್ವಲ್ಪ ನಿರಾಶೆ ಮಾಡಿದುದರ ಸಲುವಾಗಿ ಮಾರನೇ ದಿನ ರಾಮನಾಥ ಕಲ್ಯಾಣಿಯೊಡನೆ ಎಲ್ಲಿಯಾದರೂ ಹೊರಗೆ ಹೋಗೋಣವೆಂದು ಆತುರಾತುರವಾಗಿ ಮನೆಗೆ ಬಂದ. ಎಂದಿನಂತೆಯೆ ಬಾಗಿಲಿನಲ್ಲಿ ನಿಂತಿರಬೇಕಾಗಿದ್ದ ಕಲ್ಯಾಣಿ ಈ ದಿನ ನಿಂತಿರಲಿಲ್ಲ. ಅವಳು ಹೊರಬಾಗಿಲಿನಲ್ಲಿ ನಿಂತಿಲ್ಲದಿರುವುದನ್ನು ಕಂಡು ರಾಮನಾಥನಿಗೆ ಹೇಗೆ ಹೇಗೋ ಆಯಿತು.

ಮನೆಯ ಒಳಗೂ ಕಲ್ಯಾಣಿ ಕಾಣಿಸಲಿಲ್ಲ. ರಾಮನಾಥ ಮದುವೆಯಾಗಿ ಹೆಂಡತಿ ಮನೆಗೆ ಬಂದ ಮೇಲೆ ಮೊದಲನೆಯ ಸಲ ತಿಂಡಿಗಾಗಿ ಅಡಿಗೆ ಮನೆಗೆ ಬಂದ; ತಿಂಡಿ ತಿನ್ನುತ್ತಾ ಸಾತಮ್ಮನನ್ನು ಕೇಳಿದ ಮಗ.

"ಅಮ್ಮ, ಕಲ್ಯಾಣಿ ಎಲ್ಲಿ?"

ಶಾರದೆ ಬಂದು ಅವಳನ್ನು ಬಲವಂತ ಮಾಡಿ ಸಮಾಜಕ್ಕೆ ಕರೆದುಕೊಂಡು ಹೋದಳಪ್ಪಾ."

"ವಾಕಿಂಗಿಗೆ ಕರೆದುಕೊಂಡು ಹೋಗೋಣಾಂತಿದ್ದೆ."

"ಕಲ್ಯಾಣೀನೂ ಬರೋಲ್ಲಾ ಎಂದಳು. ಆದರೆ ಅವಳು ಬಿಡಲಿಲ್ಲ."

ತಿಂಡಿ ತಿಂದಾದ ಮೇಲೆ ಸಂಜೆ ಸುಮ್ಮನೆ ಮನೆಯಲ್ಲಿ ಕುಳಿತುಕೊಳ್ಳಲು ರಾಮನಾಥನಿಗೆ ಬೇಸರವಾಯಿತು. ಅವನು ಆರು ತಿಂಗಳಿನ ಹಿಂದೆ ಬಿಟ್ಟಿದ್ದ ಕ್ಲಬ್ಬಿಗೆ ಮತ್ತೆ ಸದಸ್ಯನಾಗಲು ಹೊರಟ. ಮಗ ಬಟ್ಟೆ ಬರೆ ಹಾಕಿಕೊಂಡು ಹೊರಟು ನಿಂತುದನ್ನು ಕಂಡ ಸಾತಮ್ಮ,

"ಕಲ್ಯಾಣಿ ಮನೆಗೆ ಬೇಗ ಬಂದು ಬಿಡ್ತೀನಿ ಎಂದು ಹೇಳಿದ್ದಾಳೆ" ಎಂದರು.

"ಇಲ್ಲೇ ಕ್ಲಬ್ಬಿಗೆ ಹೋಗಿ ಬಂದು ಬಿಡ್ತೀನಿ" ಎನ್ನುತ್ತಾ ರಾಮನಾಥ

ಹೊರಟು ಹೋದ.

ರಾಮನಾಥ ಹೋದ ಅರ್ಧ ಗಂಟೆಯಲ್ಲಿ ಕಲ್ಯಾಣಿ ಏದುಸಿರು ಬಿಡುತ್ತಾ ಮನೆಗೆ ಬಂದು,

"ಶಾರದನ ಮಾತಿನಿಂದ ತಪ್ಪಿಸಿಕೊಂಡು ಬರುವ ಹೊತ್ತಿಗೆ ಸಾಕಾಗಿ ಹೋಯಿತು. ಇವರು ಮನೆಗೆ ಬಂದರೇ ?" ಎಂದಳು.

"ಹೂಂ, ಕ್ಲಬ್ಬಿಗೆ ಹೋದ."

"ಕ್ಲಬ್ಬು !"

ಕಲ್ಯಾಣಿಗೆ ಆಶ್ಚರ್ಯ.

"ಹೂಂ."

"ಕ್ಲಬ್ಬು ಬಿಟ್ಟುಬಿಟ್ಟಿದೀನಿ ಎಂದರಲ್ಲಾ...."

"ಅದೇನೋಮ್ಮಾ ನನಗೆ ಗೊತ್ತಿಲ್ಲ."

ಕಲ್ಯಾಣಿಗೆ ಗಂಡನ ವರ್ತನೆಯಿಂದ ತುಂಬಾ ನಿರಾಶೆಯಾಯಿತು. ಶಾರದೆಯ ಮಾತನ್ನು ಸಂಪೂರ್ಣವಾಗಿ ತಳ್ಳಿಹಾಕಲಾರದೆ ಅವಳು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಹೋಗಿದ್ದಳು. ಅವಳ ನಾಲಿಗೆಯ ಹೊಡೆತ ಅನುಭವಿಸಿ ಕೊನೆಗೆ

"ಇವರು ಮನೆಗೆ ಬರ್‍ತಾರೆ" ಎಂದು ಹೇಳಿ ಓಡಿ ಬಂದಿದ್ದಳು.

ಈಗ ನೋಡಿದರೆ ಗಂಡ ತನಗಾಗಿ ಕಾಯದೆ ತಮ್ಮ ಪಾಡಿಗೆ ತಾವು ಕ್ಲಬ್ಬಿಗೆ ಹೋಗಿದ್ದಾರೆ!

ಕಲ್ಯಾಣಿ ಮುಂಬಾಗಿಲಿನಲ್ಲಿದ್ದ ಪಾರಿಜಾತದ ಗಿಡದ ಕೆಳಗೆ ಒಂದು ಗಳಿಗೆ ಕುಳಿತಳು. ಅವಳು ವಿರಾಮವಾಗಿ ಕುಳಿತುಕೊಂಡಿರುವುದನ್ನು ನೋಡಿ ನೆರೆಮನೆಯ ನೀರಜ ಗೋಡೆಯ ಬಂದು ನಿಂತು,

"ಎಲ್ಲೂ ಹೋಗಲಿಲ್ಲವೇನ್ರಿ ಇವತ್ತು ?" ಎಂದಳು. ಅವಳ ಮಾತುಗಳು ಅಣಕಿಸುವಂತವು.

"ಇಲ್ಲ."

"ಬನ್ನಿ ನಮ್ಮ ಮನೆಗೆ."

"ನೀವೇ ಬನ್ನಿ."

ನೀರಜ ಮರೆಯಾದಳು. ತನಗಾಗಿ ಗಂಡ ಪುನಃ ಮನೆಗೆ ಬಂದರೂ

ಬರಬಹುದು ಎಂಬ ದೂರದ ಆಸೆಯಿಂದ ಕಲ್ಯಾಣಿ ನೀರಜಳೊಡನೆ ಮಾತನಾಡುತ್ತಾ ಮನೆಯಲ್ಲಿ ಉಳಿದಳು.

ಆದರೆ ರಾತ್ರಿ ಒಂಭತ್ತು ಗಂಟೆಯಾದರೂ ರಾಮನಾಥ ಸುಳಿಯಲಿಲ್ಲ. ಕಲ್ಯಾಣಿಯ ನಿರಾಶೆ, ನೋವಾಯಿತು. ಗಂಡನ ಮೇಲಿನ ಕೋಪಕ್ಕೆ ಅವನಿಗಾಗಿ ಕಾಯದೆ ಊಟ ಮುಗಿಸಿ ಕಲ್ಯಾಣಿ ಹಾಸಿಗೆಯ ಮೇಲುರುಳಿ ನಿದ್ದೆಯ ಸೋಗು ಹಾಕಿದಳು.

ಒಂಭತ್ತು ಗಂಟೆಯ ಮೇಲೆ ರಾಮನಾಥ ಮನೆಗೆ ಬಂದ. ಕಲ್ಯಾಣಿಯಾಗಲೇ ಮಲಗಿರುವುದನ್ನು ನೋಡಿ ಅವಳಿಗೆ ಕೋಪ ಬಂದಿರಬೇಕೆಂದು ಭಾವಿಸಿದ.

ಊಟ ಮುಗಿಸಿ ಹೆಂಡತಿಯನ್ನು ಸಮಾಧಾನ ಪಡಿಸಲು ಹೋದ.

"ತುಂಬಾ ದಿನವಾಗಿತ್ತು ಕ್ಲಬ್ಬಿಗೆ ಹೋಗಿ. ಸ್ನೇಹಿತರು ಏನು ಮಾಡಿದರೂ ಬಿಡಲೇ ಇಲ್ಲ. ಆದುದರಿಂದ ಹೊತ್ತಾಯ್ತು...." ಕಲ್ಯಾಣಿಯನ್ನು ಎಬ್ಬಿಸಲು ರಾಮನಾಥ ಯತ್ನಿಸಿದ.

"ಕೇಳಿಲ್ಲಿ ಚಿನ್ನ...."

"ನಂಗೆ ನಿದ್ದೆ ಬರ್‍ತಿದೆ. ದಯವಿಟ್ಟು ಗದ್ದಲ ಮಾಡಬೇಡಿ."

"ಗದ್ದಲ ಮಾಡದೆ ನಿನ್ನ ಎಬ್ಬಿಸಲೋ ?"

ಕಲ್ಯಾಣಿ ಉತ್ತರ ಕೊಡಲಿಲ್ಲ.

"ನಂಗೇನು ಕೋಪ ಮಾಡಿಕೊಳ್ಳೋಕೆ ಬರೋದಿಲ್ಲಾಂತ ಅಂದುಕೊಂಡಿದ್ದಿಯೇನು? ನಾನು ಮನೆಗೆ ಬಂದಾಗ ನೀನ್ಯಾಕೆ ಮನೇಲಿರಲಿಲ್ಲ?"

ಕಲ್ಯಾಣಿ ಹೊದಿಕೆ ಎಸೆದು ಎದ್ದು ಕುಳಿತಳು.

"ಶಾರದ ತುಂಬಾ ಬಲವಂತ ಮಾಡಿದಳು...."

"ಹಾಗೇ ನನ್ನ ಸ್ನೇಹಿತರೂ ಬಲವಂತ ಮಾಡಿದರು.—"

"ಆದರೂ ಇಷ್ಟು ಹೊತ್ತೇಕೆ ಆಯಿತು ?"

"ಆಟ ಆಡ್ತಿದ್ದೆ. ಆಟದ ಮಧ್ಯದಲ್ಲಿ ಎದ್ದು ಬರೋದು ಸಾಧ್ಯವಾಗಲಿಲ್ಲ."

ಕಲ್ಯಾಣಿ ಸುಮ್ಮನಿದ್ದಳು. ರಾಮನಾಥ ಅವಳ ಹತ್ತಿರ ಬಂದಂತೆ ಅವನಿಗೆ ದಾರಿ ಮಾಡಿಕೊಟ್ಟು ಕೋಪ ಹಿಂದಕ್ಕೆ ಸರಿಯಿತು.

ಅಂದಿನಿಂದ ರಾಮನಾಥ ಆಗಾಗ್ಗೆ ಕ್ಲಬ್ಬಿಗೆ ಹೋಗುವುದೂ, ಕಲ್ಯಾಣಿ ಶಾರದೆಯ ಬಲವಂತದಿಂದಾಗಿ ಸಮಾಜಕ್ಕೆ ಹೋಗಿಬರುವುದೂ ಸಾಮಾನ್ಯವಾಯಿತು.

ಕಲ್ಯಾಣಿ ಸಮಾಜಕ್ಕೆ ಹೋದರೂ ರಾಮನಾಥ ಮನೆಗೆ ಬರುವವರೆಗೆ ಕಾದಿದ್ದು ಅವನು ಬಂದ ನಂತರ ಸಮ್ಮತಿ ಪಡೆದು ಸಮಾಜಕ್ಕೆ ಹೋಗುತ್ತಿದ್ದಳು. ಮದುವೆಯಾದ ತರುಣದಲ್ಲಿ ಜಾರಿಯಲ್ಲಿದ್ದ ದಂಪತಿಗಳ ವಾಕಿಂಗ್ ಕ್ರಮೇಣ ಅಪರೂಪವಾಗುತ್ತಾ ಬಂತು.

ರಾತ್ರಿ ಕ್ಲಬ್ಬಿನಿಂದ ಮನೆಗೆ ಹಿಂತಿರುಗಿ ಬರುವಾಗ ರಾಮನಾಥ ಹೂವನ್ನು ಮಾತ್ರ ಮರೆಯದೆ ತರುತ್ತಿದ್ದ. ಅವನು ಮೊದಲನೆಯ ಸಲ ಬರಿಗೈಲಿ ಬಂದಾಗ ಕಲ್ಯಾಣಿ ಕೇಳಿದಳು.

"ಹೂವು ತರಲಿಲ್ಲವಾ!"

"ಓ....ಮರೆತುಹೋಯಿತು. ಅದೂ ಅಲ್ಲದೆ ನಾನು ನಿತ್ಯದ ದಾರಿಯಲ್ಲಿ ಬರಲಿಲ್ಲ. ನನ್ನ ಗೆಳೆಯನ ಜೊತೆ ಬೇರೆ ದಾರಿಯಿಂದ ಬಂದೆ"

ಅವನು ಕೊಟ್ಟ ವಿವರಣೆ ಕಲ್ಯಾಣಿಗೆ ಸಮರ್ಪಕವಾಗಿತ್ತು. ಅಂದಿನಿಂದ ರಾಮನಾಥ ಹೂವು ತರುವುದನ್ನು ಆಗಾಗ್ಗೆ ಮರೆಯುತ್ತಿದ್ದ. ಅವನು ಮರೆತು ಬಂದ ದಿನ,

"ಯಾಕೆ ತರಲಿಲ್ಲ?" ಎಂದು ಕೇಳುವುದನ್ನೂ ಕಲ್ಯಾಣಿ ಮರೆಯುತ್ತಿದ್ದಳು. ಗಂಡ ಹೂವು ತಂದಿರುವನೋ ಇಲ್ಲವೋ ಎಂಬುದನ್ನು ಗಮನಿಸಲು ಸಹ ಕಲ್ಯಾಣಿಗೆ ಸಮಯವಿರಲಿಲ್ಲ.

ರಾಮನಾಥ ಫ್ಯಾಕ್ಟರಿಗೆ ಬೇಗ ಹೊರಡಬೇಕಾಗಿದ್ದುದರಿಂದ ಕಲ್ಯಾಣಿ ಗಂಡನ ಮನೆಗೆ ಬಂದ ತರುಣದಲ್ಲಿ ತಾನೂ ಅವನೊಡನೆ ಎದ್ದು ಗಂಡನ ಕ್ಷೌರಕ್ಕೆ ಬಿಸಿನೀರು ಒದಗಿಸಿ, ಸ್ನಾನಕ್ಕೆ ನೀರು ತೋಡಿಕೊಟ್ಟು, ಕಾಫಿ ತಿಂಡಿಯನ್ನು ರೂಮಿಗೇ ತಂದು ಸರಬರಾಜು ಮಾಡುತ್ತಿದ್ದಳು.

ಕೆಲವು ತಿಂಗಳುಗಳಾದ ಮೇಲೆ ಒಂದು ದಿನ ಕಲ್ಯಾಣಿ ಎಷ್ಟು ಹೊತ್ತಾದರೂ ಏಳಲಿಲ್ಲ. ರಾಮನಾಥ ತಾನು ಎದ್ದು ಅವಳನ್ನು ಎಬ್ಬಿಸಲು ಪ್ರಯತ್ನಿಸಿದ.

"ಬಿಸಿನೀರು ತಂದುಕೊಡೇ ಹುಡುಗಿ."

"ಊಂ....ಊಂ....ನಂಗೆ ನಿದ್ದೆ...." ಎನ್ನುತ್ತಾ ಕಲ್ಯಾಣಿ ಬೆಚ್ಚಗೆ ಹೊದೆದುಕೊಂಡು ಮಲಗಿದಳು.

"ಸೋಮಾರಿ" ಎನ್ನುತ್ತಾ ರಾಮನಾಥ ಅವಳ ಕೆನ್ನೆಯ ಮೇಲೆ ಮೃದುವಾಗಿ ಹೊಡೆದು ಹೊರಗೆ ಹೋದ.

ಅಂದಿನಿಂದ ಕಲ್ಯಾಣಿ ಏಳದಿದ್ದ ದಿನ ರಾಮನಾಥ ಅವಳನ್ನು ಎಬ್ಬಿಸುವುದನ್ನು ಬಿಟ್ಟ. ಎಷ್ಟೋ ದಿನ ರಾಮನಾಥ ಫ್ಯಾಕ್ಟರಿಗೆ ಹೊರಟು ನಿಂತ ಸಮಯದಲ್ಲೂ ಕಲ್ಯಾಣಿ ಏಳುತ್ತಿರಲಿಲ್ಲ. ಆದರಿಂದಾಗಿ ಕೆಲಸಕ್ಕೆ ಹೊರಡುವ ಮುನ್ನ ಹೆಂಡತಿಗೆ ಮುದ್ದಿಟ್ಟು ಹೋಗುವ ಪದ್ಧತಿ ಕ್ಷೀಣಿಸುತ್ತಾ ಬಂತು.

ಆದರೂ ರಾಮನಾಥನಾಗಲಿ, ಕಲ್ಯಾಣಿಯಾಗಲಿ ಅದೊಂದು ಕೊರತೆ ಎಂದು ಭಾವಿಸಿರಲಿಲ್ಲ. ಬಹಳ ಸಹಜವಾಗಿ ಆ ಪದ್ಧತಿ ತಪ್ಪಿ ಹೋಯಿತು.

ಕಲ್ಯಾಣಿ ಮದುವೆಯಾಗಿ ಮನೆಗೆ ಬಂದ ತರುಣದಲ್ಲಿ ರಾಮನಾಥ ಎಷ್ಟೇ ಹೊತ್ತಾಗಿದ್ದರೂ ಕಲ್ಯಾಣಿಯನ್ನು ಮುದ್ದಿಸಿ ಹೋಗುತ್ತಿದ್ದ. ಹಾಗೂ ರಾತ್ರಿ ನಿದ್ರೆ ಬರುವುದಕ್ಕೆ ಮುನ್ನ "ಗುಡ್‌ನೈಟ್" ಹೇಳಿ ಮುದ್ದಿಸುವುದೂ ಇತ್ತು.

ಒಂದು ಸಲಯಾವುದೋ ಕಾರಣದಿಂದಾಗಿ ಕಲ್ಯಾಣಿಯನ್ನು ಮುದ್ದಿಸದೆ ಬಸ್ ಸ್ಟ್ಯಾಂಡಿಗೆ ಹೋಗಿದ್ದ ರಾಮನಾಥ ಮತ್ತೆ ತನ್ನ ಪದ್ಧತಿಯನ್ನು ಜ್ಞಾಪಿಸಿಕೊಂಡು ಮನೆಗೆ ಬಂದು ಹೆಂಡತಿಯನ್ನು ಮುದ್ದಿಸಿ ಹೋಗಿದ್ದ.

ಮತ್ತೊಂದು ರಾತ್ರಿ ಗಂಡ "ಗುಡ್‌ನೈಟ್" ಹೇಳುವುದನ್ನು ಮರೆತು ಮಲಗಿದಾಗ ಕಲ್ಯಾಣಿ ತಾನಾಗಿಯೇ ಅವನಿಗೆ ಸುಖ ನಿದ್ದೆಯನ್ನು ಕೋರಿ ಮುಂದೆ ಬಾಗಿದಾಗ ರಾಮನಾಥ ಅವಳನ್ನು ಸರಿಸಿ ಎದ್ದು ಕುಳಿತು,

"ನನ್ನ ಗಡಿಯಾರಕ್ಕೆ ವೈಂಡ್ ಮಾಡೋದನ್ನ ಮರೆತು ಬಿಟ್ಟಿದ್ದೆ" ಎನ್ನುತ್ತಾ ಸಾವಕಾಶವಾಗಿ ಎದ್ದು ಕೋಟಿನ ಜೇಬಿನಿಂದ ಗಡಿಯಾರ ತೆಗೆದು ವೈಂಡ್" ಮಾಡಿ ಆರಾಮವಾಗಿ ಮಲಗಿಕೊಂಡ. ಅವನ ವರ್ತನೆಯಿಂದ ಕಲ್ಯಾಣಿಗೆ ಮುಖ ಭಂಗವಾದಂತಾಯಿತು. ಆಮೇಲೆಂದೂ ಅವಳು ತಾನಾಗಿಯೇ ಅವನಿಗೆ ಸುಖನಿದ್ದೆಯನ್ನು ಕೋರಲು ಪ್ರಯತ್ನಿಸಲಿಲ್ಲ.

ಭಾನುವಾರದ ದಿನ ಆದರೂ ಅವರ ಮರೆತಕ್ಕಂತೂ ಕೊನೆ ಮೊದಲೇ

ಇರಲಿಲ್ಲ. ಆ ದಿನಗಳಲ್ಲಿ ಕಲ್ಯಾಣಿ ದಿನಕ್ಕೆ ನಾಲ್ಕುಬಾರಿ ಜಡೆಹೆಣೆದು ಹೂ ಮುಡಿದು ಮದುವೆಯ ಹುಡುಗಿಯಂತೆ ಗಳಿಗೆಗೊಂದು ಸಲ ಸೀರೆ ಬದಲಾಯಿಸುತ್ತಿದ್ದಳು.

ಸಾಧಾರಣವಾಗಿ ಬೆಳಿಗ್ಗೆ ರಾಮನಾಥ ಮಡದಿಯನ್ನು ಕರೆದುಕೊಂಡು ತನ್ನ ಗೆಳೆಯರ ಮನೆಗೆ ಹೋಗುತ್ತಿದ್ದ. ಸಂಜೆಯ ಹೊತ್ತು ಸಿನಿಮಾ ತಪ್ಪಿದ್ದಂತೂ ಇಲ್ಲವೇ ಇಲ್ಲ.

ಕಲ್ಯಾಣಿಗಂತೂ ದಾಂಪತ್ಯ ಜೀವನವೆಂದರೆ ವಾಕಿಂಗ್, ಸಿನಿಮಾ, ಸರಸ, ಹೊಸ ಬಟ್ಟೆಗಳ ಉಡುಗೊರೆಗಳು, ಹೋಟೆಲ್ ತಿಂಡಿಯ ಸುರಿಮಳೆ, ಹೂವಿನ ಹಾಸಿಗೆ ಎಂದೇ ಅಭಿಪ್ರಾಯ ಬಂದುಬಿಟ್ಟಿತ್ತು.

ರಾಮನಾಥನಿಗೂ ಅಷ್ಟೆ. ಬೆಡಗು, ಬಿನ್ನಾಣ, ವೈಯ್ಯಾರ, ಸರಸ, ವಿಲಾಸ, ಇವುಗಳಿಂದ ಕೂಡಿದ ಒಂದು ಸುಂದರವಾದ ಸೌಧ ಎಂದು ಭಾವಿಸಿದ್ದ.

ಆ ಸೌಧದಲ್ಲಿ ಮುಪ್ಪಿಲ್ಲ, ಖಾಯಿಲೆಯಿಲ್ಲ, ಬಡತನವಿಲ್ಲ, ಕಷ್ಟ ಕಾರ್ಪಣ್ಯಗಳಿಲ್ಲ, ದುಃಖವಿಲ್ಲ, ಮನುಷ್ಯನಿಗೆ ಅಹಿತವಾದುದು ಯಾವುದೂ ಇಲ್ಲ.

ಆನಂದ, ಸೌಂದರ್ಯದ ಹೊರತು ಬೇರೇನೂ ಇಲ್ಲ. ಸವಿದಷ್ಟೂ ರುಚಿ ಹೆಚ್ಚುವ, ಅನುಭವಿಸಿದಷ್ಟೂ ಹುಚ್ಚು ಹೆಚ್ಚಾಗುವ, ತೃಪ್ತಿಯಾದಷ್ಟೂ ಅತೃಪ್ತಿಯ ದಳ್ಳುರಿ ಎಬ್ಬಿಸುವ, ಮಿಂದಷ್ಟೂ ಮತ್ತೆ ಮಿಾಯಬೇಕೆಂದಾಸೆ ಮೂಡಿಸುವ ಕಮಲಗಳಿಂದ ಕೂಡಿದ ತಿಳಿನೀರಿನ ಕೊಳವದು ಎಂದು ಅವರಿಬ್ಬರೂ ತಿಳಿದಿದ್ದರು.

ಮದುವೆ ವೈಭವ ಮುಗಿದ ಮೇಲೆ, ಯೌವನದ ಕಾವು, ಅಬ್ಬರ ಕೊಂಚ ತಗ್ಗಿದ ಮೇಲೆ ಅವರು ಕಣ್ಣು ಬಿಟ್ಟು ಸುತ್ತಲೂ ನೋಡುವಂತಾಯಿತು.

ಮದುವೆಯಾಗಿ ವರ್ಷ ಕಳೆಯುವುದರೊಳಗೆ ಹೂವು ಮುಡಿಯುವ, ಕೊಳ್ಳುವ ಹುಮ್ಮಸ್ಸು ಅಡಗುತ್ತಾ ಬಂತು. ಹೋಟೆಲಿನಿಂದ ರಾಮನಾಥ ಒಮ್ಮೆ ತಿಂಡಿ ತಂದಾಗ ಆಗತಾನೆ ತಿಂಡಿ ತಿಂದಿದ್ದ ಕಲ್ಯಾಣಿ,

'ಹೋಟೆಲಿನ ತಿಂಡಿಗೆ ಯಾಕೆ ಹಣ ಹಾಕ್ತೀರಿ? ಮನೇಲಿ ಅತ್ತೆ

ಬೇಕಾದ ತಿಂಡಿ ಮಾಡ್ತಾರೆ, ಶುಚಿ, ರುಚಿ ಎರಡೂ ಉಂಡು" ಎಂದಾಗ ರಾಮನಾಥನಿಗೆ ಹೌದೆನ್ನಿಸಿತು.

ಭಾನುವಾರದ ಬೆಳಗಿನ ಅಲೆದಾಟವನ್ನು ಬಿಸಿಲು ಎಂದು ಗಂಡ ಹೆಂಡಿರಿಬ್ಬರೂ ಏಕಾಭಿಪ್ರಾಯಪಟ್ಟು ನಿಲ್ಲಿಸಿದರು.

ಸಂಜೆಯ ಸಿನಿಮದ ಹುಚ್ಚಿದ್ದರೂ ಅದರ ಮೇಲಿನ ಆಸಕ್ತಿಯೂ ಕ್ರಮೇಣ ಕಡಿಮೆಯಾಗುತ್ತಾ ಬಂತು.

"ಇಬ್ಬರೂ ಒಟ್ಟಿಗೆ ಹೋದರೆ ಬಾಲ್ಕನಿಗೆ ಹೋಗಬೇಕು. ಎಂಟಾಣೆಯಲ್ಲಿ ಆಗುವ ಕೆಲಸಕ್ಕೆ ವೃಥಾ ರೂಪಾಯಿಗಟ್ಟಳೆ ಯಾಕೆ ಸುರಿಯಬೇಕು? ನೀನು ನಿನ್ನ ಗೆಳತಿಯರೊಡನೆ ಸಿನಿಮಾಗೆ ಹೋಗು. ಆಗ ಹೆಂಗಸರ ಸೀಟಿನ ಕಡೆಯೇ ಹೋಗಬಹುದು. ನಾನು ನನ್ನ ಸ್ನೇಹಿತರೊಡನೆ ಹದಿಮೂರಾಣೆ ಸೀಟಿಗೆ ಹೋಗುತ್ತೇನೆ" ಎಂದು ರಾಮನಾಥ ಸೂಚಿಸಿದ.

ಆದರೆ ಕಲ್ಯಾಣಿಗೆ ಅವನ ಸಲಹೆ ಹಿಡಿಸಲಿಲ್ಲ. "ಇಬ್ಬರೂ ಒಟ್ಟಿಗೆ ಹೋಗೋಣ. ನನ್ನ ಪಾಡಿಗೆ ನಾನು ಹೆಂಗಸರ ಕಡೆ ಹೋಗ್ತೀನಿ. ನೀವು ಗಂಡಸರ ಕಡೆ ಹೋಗಿ. ಬರುವಾಗ ಇಬ್ಬರೂ ಜೊತೆಯಲ್ಲಿ ಬರೋಣ" ಎಂದು ಅವಳು ಹೇಳಿದಳು.

ಅವಳ ಸಲಹೆಯನ್ನೂ ಸ್ವಲ್ಪ ದಿನ ಅನುಸರಿಸಲಾಯಿತು. ಆಮೇಲೆ ಅದೇಕೋ ಕಲ್ಯಾಣಿಗೇ ಅದು ಹಿಡಿಸಲಿಲ್ಲ. ಅವಳು,

"ನೀವು ಹೇಳಿದ್ದೇ ಸರಿ. ಅದೂ ಅಲ್ಲದೆ ನೀವು ತಮಿಳು, ತೆಲುಗು ಚಿತ್ರಗಳಿಗೆ ಬರೋದಿಲ್ಲಾಂತ ಬೇರೆ ಹೇಳ್ತೀರಿ. ನಾನು ಶಾರದನ ಜೊತೆ ಹೋಗ್ತೀನಿ" ಎಂದಳು.

"ಹಾಗೇ ಮಾಡು. ತಮಿಳು ಚಿತ್ರಗಳಿಗೆ ಹೋಗುವಾಗ ಹಾಸಿಗೆಯನ್ನೂ ತೆಗೆದುಕೊಂಡುಹೋಗು" ಎಂದು ರಾಮನಾಥ ಕೀಟಲೆಮಾಡಿದ.

"ನಾನು ಅಲ್ಲೇ ಮಲಗಿದರೆ ನೀವಿಲ್ಲಿ ಬಿಡುಬೀಸಾಗಿ ಮಲಗಬಹುದೂಂತ ನಿಮ್ಮಾಸೆಯೇನೋ?" ಎಂದಳು ಕಲ್ಯಾಣಿ.

"ಒಂದೊಂದು ದಿನವಾದರೂ ನಾನು ಹಾಯಾಗಿ ನಿದ್ದೆ ಮಾಡಬಹುದು" ಎಂದ ರಾಮನಾಥ.

"ನನ್ನ ಕಂಡರೆ ನಿಮಗೆ ಪ್ರೀತಿಯಿಲ್ಲ" ಎಂದು ಕಲ್ಯಾಣಿ ಗಂಡನ

ಕೈಲಿ ಜಗಳವಾಡಿ ಅತ್ತಳು.

ಅದು ಅವರ ಮೊದಲನೆಯ ಜಗಳ. ಗಂಡನ ಪ್ರೀತಿಯ ಬಗ್ಗೆ ಹೆಣ್ಣು ಅನುಮಾನಿಸಿ ಜಗಳವಾಡಿದ ಪ್ರಸಂಗವದು.

ಕಲ್ಯಾಣಿ ಕಂಬನಿ ಮಿಡಿದುದನ್ನು ಕಂಡು ರಾಮನಾಥನಿಗೆ ಕಸಿವಿಸಿಯಾಯಿತು.

"ಇಲ್ಲವೇ ಹುಡುಗಿ, ನಿನ್ನ ಕಂಡರೆ ಪ್ರೀತಿ ಇದೆ-ಅಪಾರ ಇದೆ...."

"ಏನಿಲ್ಲ. ಅದಕ್ಕೇ ನನ್ನ ಥಿಯೇಟರಿನಲ್ಲಿ ಮಲಗಿಕೋಂತ ಹೇಳ್ತಿದ್ದೀರಿ. ನಿಮಗ್ಯಾಕೆ ಅಷ್ಟೊಂದು ಕಷ್ಟ. ಇನ್ನು ಮೇಲೆ ಬೇಕಾದರೆ ನಾನು ಅತ್ತೆ ಜೊತೆ ಮಲಗ್ತೀನಿ...."

"ಕಲ್ಯಾಣಿ, ತುಂಬಾ ಪೆಚ್ಚಿ ನೀನು. ನಾನು ತಮಿಳು ಚಿತ್ರಗಳು ಅಷ್ಟೊಂದು ಉದ್ದ ಇರುತ್ತವೆ ಅನ್ನೋದಕ್ಕೆ ಹಾಗೆ ಹೇಳಿದರೆ ನೀನು ತಪ್ಪು ತಿಳಿಯುತ್ತೀಯಲ್ಲ? ನಿನ್ನ ಥಿಯೇಟರಿನಲ್ಲಿ ಮಲಗಿಕೋಂತ ನಾನು ಹೇಳೋದು ಸಾಧ್ಯವೇ? ಸ್ವಲ್ಪ ಸಕಾರಣವಾಗಿ...."

"ಹೆಣ್ಣು ಸಕಾರಣವಾಗಿ ಆಲೋಚಿಸಬೇಕು ಎಂದು ನಿರೀಕ್ಷಿಸುವಷ್ಟು ಗಂಡಸರು ಮೂರ್ಖರೇ?"

"ಹಾಗಾದರೆ ಹೆಣ್ಣು ಸಕಾರಣವಾಗಿ ಆಲೋಚಿಸೋದಿಲ್ಲಾನ್ನು."

"ನನ್ನ ಸುಮ್ಮನೆ ಕೆದಕಿ ಕೆದಕಿ ಕೇಳಬೇಡಿ"

"ಅದೊಂದು ಪ್ರಶ್ನೆಗೆ ಉತ್ತರ ಹೇಳಿಬಿಡು."

"ನನ್ನ ಪ್ರಶ್ನೆಗೆ ಮೊದಲು ಉತ್ತರ ಹೇಳಿ."

"ಏನದು?"

"ನನ್ನ ಪ್ರೀತಿಸುತ್ತೀರೋ ಇಲ್ಲವೋ?"

"ತುಂಬಾ ತುಂಬಾ ತುಂಬಾ."

"ನಂಗೇನೋ ಅನುಮಾನ. ನಿಮಗೆ ನನ್ನಲ್ಲಿ ಮೊದಲಿದ್ದಷ್ಟು ಪ್ರೀತಿ ಇಲ್ಲ."

"ಹೇಗೆ ಹೇಳ್ತೀಯ?"

"ಹೇಗೋ ನಂಗೆ ತಿಳಿಯುತ್ತದೆ."

"ಹೇಗೆ ಹೇಳು?"

"ನಿಮಗೆ ನನ್ನಲ್ಲಿ ತಾತ್ಸಾರ. ನನ್ನ ಕಂಡರೆ ಮೊದಲಿನ ಹಾಗಿಲ್ಲ...."

"ನೋಡು ಚಿನ್ನ, ಸಿಹಿ ತಿಂಡಿ ಇಷ್ಟಾಂತ ಪ್ರತಿದಿನವೂ ಸಿಹಿ ತಿಂಡೀನೇ ತಿನ್ತಿದ್ದರೆ ಅದೂ ಬೇಜಾರು ಬರುತ್ತದೆ. ಹೌದೋ ಅಲ್ಲವೋ?"

"ಹೌದು."

"ಅದಕ್ಕೇ ಒಂದು ದಿನ ಸಪ್ಪೆ—ಅಂದರೆ ಉದಾಸೀನವಾಗಿರೋದು, ಒಂದೊಂದು ದಿನ ಖಾರ–ಅಂದರೆ ಜಗಳ ಕಾಯೋದು. ಉಪ್ಪು–ಕಣ್ಣೀರು ಕರೆಯೋದು, ಸಿಹಿ-ಅಂದರೆ ಪ್ರೀತಿ ಮಾಡೋದು... ತಿಳೀತಾ?"

"ಮೊಂಡುವಾದ ನಿಮ್ಮದೆಲ್ಲ."

ಎಂದು ಕಲ್ಯಾಣಿ ಮೇಲೆ ಸಿಡುಕಿದರೂ ಒಳಗೊಳಗೇ ಗಂಡನ ಮಾತನ್ನು ಮನಸ್ಸು ಒಪ್ಪಿಕೊಂಡಿತ್ತು.

ಒಂದೊಂದು ದಿನ ಗಂಡ ತನ್ನಲ್ಲಿ ಅತಿ ಪ್ರೀತಿಯನ್ನು ತೋರಿಸಿದಾಗ ಕಲ್ಯಾಣಿಗೆ 'ಅವರು ನನ್ನ ಪಾಡಿಗೆ ನನ್ನ ಬಿಡಬಾರದೆ?' ಎಂದುಕೊಳ್ಳುತ್ತಿದ್ದಳು. ಗಂಡನು ನೀಡಿದ ತೋಳುಗಳಿಗೆ ಹೋಗಿ ಸೇರಿಸಿಕ್ಕಲು ಕಾತರಿಸುತ್ತಿದ್ದ ಅವಳ ಶರೀರ ಈಗ ಆ ಉತ್ಸಾಹವನ್ನು ಕಳೆದುಕೊಂಡಿತ್ತು.

ಒಮ್ಮೆ ರಾಮನಾಥ ಕೈ ನೀಡಿದರೂ ಕಲ್ಯಾಣಿ 'ಬಿಡ್ರಿ ನಂಗೆ ಬಹಳ ಓದುವುದಿದೆ' ಎಂದು ಬೆನ್ನು ತಿರುಗಿಸಿದ್ದೂ ಉಂಟು.

ಮತ್ತೊಮ್ಮೆ ರಾಮನಾಥ ಆಲಸ್ಯನಾಗಿದ್ದಾಗ ಬೆಡಗು ಬಿನ್ನಾಣದಿಂದ ಹೋಗಿ ಅವನ ಕೊರಳನ್ನು ಕಟ್ಟಿಕೊಂಡಿದ್ದೂ ಉಂಟು.

ಮದುವೆಯಾದ ತರುಣದಲ್ಲಿ ಎಂತಹ ಉತ್ಸಾಹ!

ಒಂದು ಗಳಿಗೆ ಸಹಿತ ಒಬ್ಬರನ್ನೊಬ್ಬರು ಬಿಟ್ಟಿರುವುದು ಅಸಹನೀಯವಾಗಿರುತ್ತಿತ್ತು.

ಕಲ್ಯಾಣಿ ಒಂದು ಗಳಿಗೆ ಕಾಣಿಸದಿದ್ದರೆ 'ಕಲ್ಯಾಣಿ' ಎಂದು ಕೂಗಿ ರಾಮನಾಥ ಮನೆಯೆಲ್ಲ ಹುಡುಕುತ್ತಿದ್ದ. ಅವಳೂ ಸಹಿತ ಅವನ ಆಗಮನವನ್ನು ಹಸಿದ ಕಣ್ಣುಗಳಿಂದ ಎದಿರುನೋಡುತ್ತಾ ಮುಂಬಾಗಿಲಿನಲ್ಲಿಯೇ ನಿಂತಿರುತ್ತಿದ್ದಳು.

ಈಗ ಮನೆಗೆ ಬಂದು ಒಂದು ಗಂಟೆಯಾಗಿ ಕಲ್ಯಾಣಿ ಕಣ್ಣಿಗೆ ಬೀಳದಿದ್ದರೂ ರಾಮನಾಥ ತಾಯಿಯನ್ನೊಮ್ಮೆ 'ಅವಳೆಲ್ಲಿ?' ಎಂದು ವಿಚಾರಿಸಿ

ಸುಮ್ಮನಾಗುತ್ತಿದ್ದ. ಕಲ್ಯಾಣಿಯೂ ಸಹಿತ 'ನಾನು ಶಾರದನ ಜೊತೆ ಹೋಗ್ತೀನಿ. ಇವರು ಮನೆಗೆ ಬಂದರೆ ಹೇಳಿಬಿಡಿ' ಎಂದು ಅತ್ತೆಗೆ ಹೇಳಿ ಹೊರಟುಹೋಗುತ್ತಿದ್ದಳು.

ಮೊದಮೊದಲು ಕಲ್ಯಾಣಿ ಹಾಗೆ ಹೊರಟುಹೋದಾಗ ರಾಮನಾಥನಿಗೆ 'ನನಗೆ ಹೇಳಿಬಿಟ್ಟು ಹೋಗುವ ತಾಳಿಕೆ ಅವಳಿಗಿಲ್ಲ' ಎಂದು ಅಸಮಾಧಾನ ಉಂಟಾದರೂ ಆಮೇಲೆ 'ಅವಳಿಗೆ ತನಗಿಷ್ಟ ಬಂದಕಡೆ ಹೋಗುವ ಸ್ವಾತಂತ್ರ್ಯವೂ ಬೇಡವೆ' ಎಂದು ಸಮಾಧಾನ ಮಾಡಿಕೊಂಡ.

ಅತಿ ಸಾಮೀಪ್ಯ, ಸಾನ್ನಿಧ್ಯದಿಂದಾಗಿ ಗಂಡಹೆಂಡತಿ ಪರಸ್ಪರ ಕುತೂಹಲ, ಆಕರ್ಷಣೆಯನ್ನು ಕಳೆದುಕೊಂಡರು.

ಒಂದು ಸಂಜೆ ಕಲ್ಯಾಣಿ ತಲೆನೋವೆಂದು ಎಲ್ಲಿಯೂ ಹೋಗದೆ ಮನೆಯಲ್ಲಿದ್ದಳು. ರಾಮನಾಥ ಫ್ಯಾಕ್ಟರಿಯಿಂದ ತಂದಿದ್ದ ಇಂಗ್ಲೀಷ್ ಸಿನಿಮಾ ಮಾಸಪತ್ರಿಕೆಯೊಂದನ್ನು ಕೈಲಿ ಹಿಡಿದು, ವರಾಂಡದಲ್ಲಿದ್ದ ಕುರ್ಚಿಯ ಮೇಲೆ ಓದುತಾ ಕುಳಿತಳು ಕಲ್ಯಾಣಿ.

ಸಾತಮ್ಮನವರಿಗೆ ಮನೆಗೆಲಸವೆಲ್ಲ ಮುಗಿದಿತ್ತು. ಆಕೆಯೂ ವಿರಾಮವಾಗಿ ಸೊಸೆಯ ಎದುರಿನಲ್ಲಿ ಕುಳಿತು ಎಲೆಯಡಿಕೆ ಹಾಕಿಕೊಳ್ಳುತ್ತಿದ್ದರು.

"ಯಾವ ಪುಸ್ತಕವೇ ನೀನು ಓದುತ್ತಿರೋದು ?"

"ಸಿನಿಮಾದ್ದು."

"ಎಲ್ಲಿ ನಂಗೂ ತೋರಿಸು ನೋಡೋಣ"

ಕಲ್ಯಾಣಿ ಪುಸ್ತಕವನ್ನುತೆಗೆದುಕೊಂಡು ಹೋಗಿ ಅತ್ತೆಯ ಕೈಗೆ ಕೊಟ್ಟಳು.

"ಇದ್ಯಾರಿದು ? ಹೆಣ್ಣೋ ಗಂಡೋ ಅದೂ ಸಹಿತ ತಿಳಿಯೋಲ್ಲ" ಎಂದರು ಸಾತಮ್ಮ, ಈಜುವ ಉಡಿಗೆಯಲ್ಲಿದ್ದ ಹೆಣ್ಣೊಂದನ್ನು ಕಂಡು.

ಕಲ್ಯಾಣಿಗೆ ನಗು ಬಂತು.

"ಅದು ಹೆಂಗಸು ಅತ್ತೆ."

"ಅಯ್ಯೊ ರಾಮ, ಹೀಗೆ ಬರಿ ಮೈಲಿದಾಳಲ್ಲ ? ಇದನ್ನು ನೋಡಿದರೆ ಪಾಪ ಬರುತ್ತೆ" ಎಂದರಾಕೆ.

ಶೇಷಯ್ಯನವರೂ ಹೊರಗೆ ಬಂದು ಹೆಂಡತಿಗೆ "ಕೆಲಸವೆಲ್ಲ ಆಯಿತೆ, ಸಾತು?" ಎಂದರು.

"ಹೂಂ"

"ಬರ್‍ತೀಯಾ ಸ್ವಲ್ಪದೂರ ಹೋಗಿಬರೋಣ. ಮನೇಲಿ ವಿಪರೀತ ಧಗೆ. ಹೊರಗೆ ತಣ್ಣಗೆ ಗಾಳಿ ಬೀಸ್ತಿದೆ."

"ಹೂಂ ಈಗ ಬಂದೆ" ಎನ್ನುತ್ತಾ ಸಾತಮ್ಮ ಸಡಗರದಿಂದ ಒಳಗೆ ಹೋದರು.

ಐದು ನಿಮಿಷಗಳಲ್ಲಿ ಸಾತಮ್ಮ ಬಣ್ಣಗಿದ್ದ ಕೆಂಪು ಸೆರಗಿನ ಕುತ್ಯಾಲದ ಸೀರೆಯುನ್ನುಟ್ಟು, ತಲೆಗೆ ತುಲಸಿಗಿಟ್ಟಿದ್ದ ಒಂದು ನಂಜಬಟ್ಟಲ ಹೂವನ್ನಿಟ್ಟುಕೊಂಡು ಹೊರಗೆ ಬಂದರು.

ಸಾತಮ್ಮ ಬಾಗಿಲಿನ ಬಳಿ ನಿಂತು 'ಮನೆಯಲ್ಲಿ ಇರ್‍ತೀಯಾ? ರಾಮಣ್ಣ ಬಂದರೆ ತಿಂಡಿ, ಕಾಫಿ ಕೊಡು' ಎನ್ನುತ್ತಾ ಗಂಡನೊಡನೆ ಮೆಟ್ಟಿಲಿಳಿದರು.

ಶೇಷಯ್ಯನವರು ಹಣದ ಒಂದು ವಿಷಯವನ್ನು ಬಿಟ್ಟರೆ ಮಿಕ್ಕೆಲ್ಲ ವಿಷಯುಗಳಲ್ಲೂ ಹೆಂಡತಿಯನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಎಲ್ಲಿಯವರೆಗೆ ಹಣದ ಮಾತು ಬರುತ್ತಿರಲಿಲ್ಲವೋ ಅಲ್ಲಿಯವರೆಗೆ ಅವರು ಹೆಂಡತಿಯೊಡನೆ ಅಪರಿಮಿತ ವಿಶ್ವಾಸದಿಂದ ಇರುತ್ತಿದ್ದರು. ಖರ್ಚಿನ ಬಾಬ್ತು ಬಂದ ಕೂಡಲೇ ಸಿಟ್ಟಿಗೆದ್ದು, ರೇಗಾಡಿ ಹೆದರಿಸಿ ಹೊರಗೆ ಹೊರಡುತ್ತಿದ್ದರು. ಹಣದ ವಿಷಯವನ್ನೇ ಎತ್ತದಿದ್ದರೆ ಶೇಷಯ್ಯನವರಂತಹ ಮನುಷ್ಯರೇ ಇಲ್ಲ ಎನ್ನಬಹುದಾಗಿತ್ತು.

ಕಲ್ಯಾಣಿ ಬಾಗಿಲಿನಲ್ಲಿ ನಿಂತು ಸ್ವಲ ದೂರದಲ್ಲಿ ಜೊತೆಯಾಗಿ ಹೋಗುತ್ತಿದ್ದ ಮುಪ್ಪಿನ ದಂಪತಿಗಳನ್ನು ಕಣ್ಣುತುಂಬ ನೋಡಿದಳು.

ಅವರನ್ನು ನೋಡಿ ಅವಳಿಗೆ ಒಂದು ಬಗೆಯ ಅಸೂಯೆ ಉಂಟಾಯಿತು.

ಮದುವೆಯಾಗಿ ಇನ್ನೂ ಎರಡು ವರ್ಷಗಳನ್ನು ಸಹ ಕಳೆಯದಿದ್ದ ತಮಗೆ ಇಷ್ಟರಲ್ಲೇ ಜೀವನದಲ್ಲಿ ನಿರುತ್ಸಾಹ, ನಿರಾಸಕ್ತಿ ಮೂಡಲು ಕಾರಣವೇನು?

ಸಾತಮ್ಮ ಅವಿದ್ಯಾವಂತರು. ತನ್ನಂತೆ ಗಂಡನನ್ನು ವಿಧವಿಧವಾಗಿ ಹೆಸರಿಟ್ಟು ಕೂಗಿ ಖಂಡಿತ ಅರ್ಚಿಸಲಾರರು.

ತಾನು ರಾಮನಾಥನನ್ನು ಮುದ್ದುಮಾಡುತ್ತಿದ್ದ ಬಗೆಯೋ? ನೂರಾರು ರೀತಿಯ ಅದರ ಬಗೆಗೆ ಒಂದು ಪುರಾಣವನ್ನೇ ಬರೆಯಬಹುದು.

ಹಾಗಾದರೆ ತಮ್ಮ ಪ್ರೇಮದಲ್ಲಿ ನಾಟಕೀಯತೆ ತುಂಬಿದೆಯೇ? ತಮ್ಮ ಪ್ರೀತಿ ಸಹಜತೆಯಿಂದ ದೂರವಾಗಿದೆಯೇ?

ಎಷ್ಟೋ ಬಾರಿ ಕನ್ನಡದಲ್ಲಿ ಮುದ್ದು ಹೆಸರುಗಳನ್ನು ಕಾಣದೆ ಕಲ್ಯಾಣಿ ಪರದೇಶಿ ಭಾಷೆಯ ಮರೆಹೊಕ್ಕು ಗಂಡನನ್ನು ಮುದ್ದಿಸಿದ್ದಳು.

ಆದರೂ ಹೀಗೇಕೆ?

ಈಗ ತಮ್ಮಿಬ್ಬರಿಗೂ ಮೊದಲಿನಂತೆ ವಾಕಿಂಗ್ ಹೋಗುವ ಉತ್ಸಾಹ ವಿಲ್ಲ. ಜೊತೆಯಾಗಿ ತಿರುಗಬೇಕೆಂಬ ಇಚ್ಛೆ ಇಷ್ಟು ಬೇಗ ಮಾಯವಾಗಲು ಕಾರಣವೇನು?

ಈ ವಯಸ್ಸಿನಲ್ಲಿಯೂ ಜೊತೆಯಾಗಿ ತಿರುಗಬೇಕೆಂಬ ಹಂಬಲನ್ನು ಉಳಿಸಿಕೊಂಡು ಬಂದಿರುವ ಈ ವೃದ್ಧ ದಂಪತಿಗಳ ದಾಂಪತ್ಯ ಜೀವನದ ಗುಟ್ಟೇನು?

ಶೇಷಯ್ಯನವರೋ ಮಹಾ ಜಿಪುಣರು. ರಾಮನಾಥ ಹೆಂಡತಿ ಬಯಸಿದ ವಸ್ತುಗಳನ್ನು ಕೂಡಲೇ ತರುತ್ತಿದ್ದ. ಶೇಷಯ್ಯನವರು ಹೆಂಡತಿಗೆ ಮೂರು ಕಾಸಿನ ಸಾಮಾನು ತಂದುಕೊಟ್ಟರೂ ಅದನ್ನು ಬಹಳ ಸಂಭ್ರಮದಿಂದ ತರುತ್ತಿದ್ದರು. ಅವರು ತಂದುಕೊಟ್ಟ ಸಂದರ್ಭವನ್ನು ಸಾತಮ್ಮನವರೂ ವಿಶೇಷ ಸಡಗರದಿಂದ ಆಚರಿಸುತ್ತಿದ್ದರು.

ರಾಮನಾಥ ಯಾಂತ್ರಿಕವಾಗಿ ಕಲ್ಯಾಣಿ ಬಯಸಿದುದನ್ನು ತಂದು ಕೊಡುತ್ತಿದ್ದ. ಅವಳೂ ಅಷ್ಟೇ ಯಾಂತ್ರಿಕವಾಗಿ ಅದನ್ನು ಸ್ವೀಕರಿಸುತ್ತಿದ್ದಳು.

ಸಾತಮ್ಮನ ಒಂದು ಮಡಿಸೀರೆಯುಡುವಾಗಿನ ತೃಪ್ತಿ ಕಲ್ಯಾಣಿಗೆ ಟಾರ್ಬಾನ್ ಸೀರೆಯುಡುವುದರಲ್ಲಿಯೂ ಇರಲಿಲ್ಲ.

ತಾವಿಬ್ಬರೂ ಈಗಲೇ ಹೀಗಿದ್ದ ಮೇಲೆ ವಯಸ್ಸಾದರೆ ಹೇಗಿರಬಹುದೋ?

ಕಲ್ಯಾಣಿ ಮೈಮರೆತು ಬೀದಿಯ ಬಾಗಿಲಿನಲ್ಲಿ ನಿಂತಿದ್ದಳು. ರಾಮನಾಥ ಬಂದುದನ್ನು ಅವಳು ಗಮನಿಸಲಿಲ್ಲ. ರಾಮನಾಥ ತೀರ ಹತ್ತಿರಕ್ಕೆ ಬಂದಾಗ ಕಲ್ಯಾಣಿ ಎಚ್ಚರಗೊಂಡು ಒಳಗೆ ಹೋದಳು.

"ಅಮ್ಮಾವರು ಅಷ್ಟೊಂದು ಯೋಚನಾಪೀಡಿತರಾಗಿದ್ದರು?"

"ಇಲ್ಲಪ್ಪ. ನಿಮ್ಮ ತಂದೆ ತಾಯಿ ವಾಕಿಂಗಿಗೆ ಹೋದರು. ನಾನು ನೋಡ್ತಾ ನಿಂತಿದ್ದೆ"

"ನಿನ್ನ ಕರೆಯಲಿಲ್ಲಾಂತ ನಿನಗೆ ಕೋಪವೇನೋ ?"

"ಅವರು ಕರೆದಿದ್ದರೂ ಹೋಗುತ್ತಿರಲಿಲ್ಲ. ಅವರಿಬ್ಬರ ನಡುವೆ ನಾನೇಕೆ ? ಅವರ ಮಾತು, ಕತೆ ಏನೇನು ಇರುತ್ತದೆಯೋ?"

"ಸಮಾಜಕ್ಕೆ ಹೋಗೋಲ್ಲವಾ ?"

"ಇಲ್ಲ. ಯಾಕೋ ತಲೆನೋವು"

"ನನ್ನ ಟ್ರಂಕಿನಲ್ಲಿ ಆಸ್ಪ್ರೋ ಇದೆ. ಬೇಕಾದರೆ ತಗೋ" ಎಂದವನೇ ರಾಮನಾಥ ಕಾಫಿ ತಿಂಡಿ ಮುಗಿಸಿ ಕ್ಲಬ್ಬಿಗೆ ಹೊರಟ.

ತನಗೆ ತಲೆನೋವೆಂದಾಗಲಾದರೂ ಗಂಡ ಮನೆಯಲ್ಲಿಯೇ ಉಳಿಯಬಾರದೆ ಎಂದು ಕಲ್ಯಾಣಿಯ ಹೃದಯ ಹಂಬಲಿಸಿತು.

ತಲೆನೋವು ಏನು ಮಹಾ ಖಾಯಿಲೆ ಎಂದು ರಾಮನಾಥನಿಗೆ ತಾತ್ಸಾರ.

"ಕ್ಲಬ್ಬಿಗೆ ಹೊರಟಿರಾ ?"

"ಹೂಂ"

ಕಲ್ಯಾಣಿ ಈಗ ಬಾಯಿಬಿಟ್ಟು ಹೇಳಿದಳು.

"ನಂಗೊಬ್ಬಳಿಗೇ ಬೇಜಾರು ಮನೆಯಲ್ಲಿ"

"ಹಾಗಾದರೆ ಹೋಗೋದಿಲ್ಲ"

ಎಂದವನೇ ರಾಮನಾಥ ಅಂದಿನ ಪತ್ರಿಕೆ ಹಿಡಿದು ಕಲ್ಯಾಣಿಯ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತ.

ಕಲ್ಯಾಣಿ ಮಂಕಾಗಿ ಹತ್ತು ನಿಮಿಷ ಕುಳಿತಿದ್ದಳು. ರಾಮನಾಥ ಯಾವ ಮಾತೂ ಆಡದಿರುವುದನ್ನು ನೋಡಿ,

"ನೀವು ಹೀಗೆ ಸುಮ್ಮನೆ ಕುಳಿತುಕೊಂಡರೆ ನನಗೆ ಬೇಜಾರು" ಎಂದಳು.

"ಕುಣಿಯಲೇ? ಮನರಂಜನೆ ಮಾಡಲೇ ?"

"ನಿಮ್ಮ ದಮ್ಮಯ್ಯ ನೀವು ಕ್ಲಬ್ಬಿಗೇ ಹೋಗಿ. ನಾನು ಹಗಲು ಗನಸು ಕಾಣ್ತಾ ಸಮಯ ಕಳೆಯುತ್ತೇನೆ."

"ಥಾಂಕ್ಸ್"

ರಾಮನಾಥ ಎದ್ದು ಕ್ಲಬ್ಬಿಗೆ ಹೊರಟ.

ಕಲ್ಯಾಣಿ ಚಾಪೆಯ ಮೇಲೆ ಸಿನಿಮಾಪುಸ್ತಕ ಹಿಡಿದು ಕುಳಿತಳು. ಹಾಲಿವುಡ್ಡಿನ ಬಿಸಿಬಿಸಿ ಸುದ್ದಿಯೊಂದನ್ನು ಪತ್ರಿಕೆಯವರು ಪ್ರಕಟಿಸಿದ್ದರು.

ಆತ ಆಕೆಯನ್ನು ಮದುವೆಯಾದ. ಪತ್ರಿಕಾ ಪ್ರತಿನಿಧಿಗಳ ಎದುರಿಗೆ ಆಕೆ ಹೇಳಿದಳು "ನನ್ನ ಜೀವನದಲ್ಲಿ ಇವನೊಬ್ಬನೇ ಪುರುಷ." ಆತ ಹೇಳಿದ—ನನ್ನ ಜೀವನದಲ್ಲಿ ಈಕೆಯೊಬ್ಬಳೇ ಸ್ತ್ರೀ—ಆ ಪ್ರಸಂಗ ನಡೆದ ಹದಿನೈದು ದಿನಗಳಲ್ಲಿ 'ಮೆಂಟಲ್ ಕ್ರೂಯಲ್ಟಿ' ಪ್ರಯುಕ್ತ ದಂಪತಿಗಳು ದಾಂಪತ್ಯ ವಿಚ್ಛೇದನ ಪಡೆದರು.

ಯಾಕೆ ಈ ಕ್ಷಣಿಕ ಪ್ರೇಮ?

ತಮ್ಮ ಪ್ರೀತಿ, ಉತ್ಸಾಹ ಕೇವಲ ಕ್ಷಣಭಂಗುರವಾಗಲು ಕಾರಣ ವೇನು?

ಹೂವಿನಷ್ಟೇ ಅಲ್ಪಾಯುವುಳ್ಳದ್ದು ತಮ್ಮ ಪ್ರೀತಿ. ಬೆಳಿಗ್ಗೆ ಮೊಗ್ಗು —ಮಧ್ಯಾಹ್ನ ಹೂವು–ಸಂಜೆ ಒಣಗುವ ಪುಷ್ಪ–ರಾತ್ರಿಗೆ ಹಳೆಯ ಹೂ.

ಯಾಕೆ ಹೀಗೆ?

ಊಟ—ಉಡುಗೆಯಲ್ಲಿ ಉತ್ಸಾಹವಿಲ್ಲ, ಮನೆಗೆಲಸದಲ್ಲಿ ನಿರುತ್ಸಾಹ.

ವಯಸ್ಸು ಚಿಕ್ಕದು ನಿಜ. ಆದರೆ ಜೀವನದಲ್ಲಿ ತಾವು ತೋರಿಸುವ ಆಸಕ್ತಿ ನೋಡಿದರೆ ತಾವು ಖಂಡಿತವಾಗಿಯೂ ಮುದುಕರು.

ಮನೆಗೆ ಹಿಂತಿರುಗಿ ಬಂದ ದಂಪತಿಗಳ ಜೋಡಿ ಬಹಳ ಗೆಲು ವಾಗಿತ್ತು.

ಸಾತಮ್ಮನಂತೂ ಹೊಸ ಸೀರೆಕೊಂಡ ಹುಡುಗಿಯಂತೆ ಹಿಗ್ಗುತ್ತಿ ದ್ದರು.

ಅಡಿಗೆಯ ಮನೆಗೆ ಬಂದವರೇ ಸಾತಮ್ಮ ಹರ್ಷದಿಂದ ಸೊಸೆಗೆ ಹೇಳಿ ದರು

"ನಾಳೆ ದಿನ ಒತ್ತುವ ಶಾವಿಗೆ ಮಾಡೋಣಾಂತ ಇದೀನಿ. ಇವರೂ ಒಪ್ಪಿಕೊಂಡರು ದಾರಿಯುದ್ದಕ್ಕೂ ನನಗೂ ಅವರಿಗೂ ಅದೇ ಚರ್ಚೆ. ಕೊನೆಗೆ ಬಾಯಿಚಪಲ ತಡೆಯಲಾರದೆ ಇವರು ಒಪ್ಪಿಕೊಂಡರು."

ಅಯ್ಯೋ ಇಷ್ಟೇನೇ ಈಕೆಯ ಹಿಗ್ಗಿಗೆ ಕಾರಣ? ದಾರಿಯುದ್ದಕ್ಕೂ ಅವರು ಚರ್ಚಿಸಿದ ವಿಷಯ–ಒತ್ತು ಶಾವಿಗೆ!

ಅದೇನು ಸುಲಭದ ಕೆಲಸವೇ? ರೇಜಿಗೆಯ ಕೆಲಸ ಯಾರ ಕೈಲಾಗುತ್ತಪ್ಪ–ಅಷ್ಟೊಂದು ಕಷ್ಟಪಟ್ಟುಕೊಂಡಾದರೂ ಅದನ್ನು ಮಾಡಿ ತಿನ್ನೋದು. ತನ್ನ ಕೈಲಂತೂ ಖಂಡಿತ ಸಾಧ್ಯವಿಲ್ಲ. ಊಹೂ. ಆ ರೀತಿ ಕಷ್ಟಪಡುವುದರಬದಲು ಹೋಟಲಿಗೆ ಹಣ ತೆತ್ತು ತಿಂಡಿ ತಿನ್ನುವುದು ವಾಸಿ.

ಆ ದೇಹಶ್ರಮ ಯಾರಿಗೆ ಬೇಕು?

"ಸರಿ" ಎಂದಳು ಕಲ್ಯಾಣಿ.

ಅಷ್ಟೊಂದು ಸಣ್ಣ ವಿಷಯದಲ್ಲೂ ಅವರು ಇಷ್ಟು ಆನಂದ ಹೇಗೆ ಅನುಭವಿಸುತ್ತಾರೆ? ರಾಮನಾಥ ತನಗೆ ಕೊಹಿನೂರು ವಜ್ರವನ್ನೇ ತಂದು ಕೊಟ್ಟಿದ್ದರೂ ಅಷ್ಟು ತೃಪ್ತಿ ಆಗುತ್ತಿರಲಿಲ್ಲವೇನೋ?

ಹೆಂಡತಿ ತಲೆನೋವೆಂದು ಹೇಳಿದ್ದರಿಂದಲೋ ಏನೋ ರಾಮನಾಥ ಎಂದಿಗಿಂತಲೂ ಸ್ವಲ್ಪ ಮುಂಚಿತವಾಗಿ ಮನೆಗೆ ಬಂದ.

ತನ್ನನ್ನು ಕಂಡರೆ ಇನ್ನೂ ಪ್ರೀತಿಯಿದೆ ಎಂದುಕೊಂಡಳು ಕಲ್ಯಾಣಿ.

"ಹೇಗಿದೆ ಚಿನ್ನ ತಲೆನೋವು?"

"ಈಗ ಕೊಂಚ ವಾಸಿ."

"ಅಮೃತಾಂಜನ ಕೊಡಲೆ?"

"ಬೇಡ."

"ಅಯ್ಯೋ ಆ ಅಮೃತಾಂಜನವಲ್ಲವೆ ಪೆದ್ದೂ, ನನ್ನ ಅಧರಾಂಜನ."

"ಹೋಗ್ರಿ."

"ಇದು ನನ್ನ ಮನೆ. ಹೋಗೂಂದರೆ ಎಲ್ಲಿಗೆ ಹೋಗಲಿ?"

ಹೆಂಡತಿಯ ತಲೆನೋವನ್ನು ನಿರ್ಲಕ್ಷಿಸಿ ಕ್ಲಬ್ಬಿಗೆ ಬಂದ ಮೇಲೆ ರಾಮನಾಥನಿಗೆ ಹೆಂಡತಿಯದೇ ಯೋಚನೆ ಹಿಡಿಯಿತು. ಮನೆಯಲ್ಲಿ ಅವಳೆದುರಿಗೇ ಇದ್ದರೆ ಅವನು ಖಂಡಿತ ಯೋಚಿಸುತ್ತಿರಲಿಲ್ಲ. ಅವಳಿಂದ ದೂರ ಬಂದಾಗ

ಅವನ ಮನಸ್ಸು ಮಿಡಿಯಿತು. 'ಪಾಪ! ಕಲ್ಯಾಣಿ'.

ರಾತ್ರಿ ಬೆಳದಿಂಗಳು ತಾನೆ ತಾನಾಗಿ ಜಗತ್ತನ್ನು ಕವಿದಿತ್ತು. ರಾಮನಾಥ, ಕಲ್ಯಾಣಿ ಮಲಗಿದ್ದ ರೂಮಂತೂ ಬೆಳದಿಂಗಳಿನ ಹೊಳೆಯಲ್ಲಿ ಮುಳುಗಿಹೋಗಿತ್ತು.

ಕಲ್ಯಾಣಿ ಸೆಕೆಯೆಂದು ಹೊದಿಕೆಯನ್ನು ಬಿಸಾಡಿದ್ದಳು. ಅವಳ ಕಿವಿಯಲ್ಲಿದ್ದ ಓಲೆಗಳು ಬೆಳದಿಂಗಳಿನಲ್ಲಿ ಥಳಗುಟ್ಟಿದವು. ಕಣ್ಣುಗಳು ಚಂದ್ರನಲ್ಲಿ ನೆಟ್ಟಿದ್ದವು.

ಬೆಳದಿಂಗಳ ಗುಲಾಮನಾಗಿ ರಾಮನಾಥ ಅತ್ಯಂತ ಪ್ರೀತಿಯಿಂದ

'ಕಲ್ಯಾಣಿ, ನಾನು ನಿನ್ನನ್ನು ಪ್ರೀತಿಸುತ್ತೀನೆ' ಎಂದ.

"ಏನೆಂದಿರಿ ?"

ತಾನು ಅಂತಹ ಮಾತನಾಡಿದಾಗಲೂ ಅವಳು ಅನ್ಯಮನಸ್ಕಳಾಗಿದ್ದಳೆಂದರೆ ?

ರಾಮನಾಥನಿಗೆ ರೇಗಿಹೋಯಿತು.

"ಏನಿಲ್ಲ. ನಿದ್ದೆ ಬಂತಾ ಅಂತ ಕೇಳಿದೆ."

"ಇನ್ನೂ ಬಂದಿಲ್ಲ."

"ಸರಿ. ಗುಡ್ ನೈಟ್" ಎಂದು ಒರಟಾಗಿ ಹೇಳಿ ರಾಮನಾಥ ಮತ್ತೊಂದು ಪಕ್ಕಕ್ಕೆ ತಿರುಗಿಕೊಂಡ.

ಮತ್ತೊಂದು ರೂಮಿನಲ್ಲಿದ್ದ ಶೀನಯ್ಯನವರು ಸಾತಮ್ಮನಿಗೆ

'ನಾನೇ ಶಾಮಿಗೆ ಒತ್ತಿಕೊಡುತ್ತೀನೆ. ನೀನು ಸ್ವಲ್ಪವೂ ಆಯಾಸ ಮಾಡಿಕೋಬಾರದು' ಎಂದರು.

"ಆಗಲಿ ಮಹಾರಾಯರಾಗಿ ಒತ್ತಿಕೊಡಿ. ಚಿಗುಳಿನೂ ಕುಟ್ಟಬೇಕು. ಶಾಮಿಗೆಗೆ ಚಿಗುಳಿ ಬಲು ರುಚಿ"

"ಚಿಗುಳಿ ತಿಂದು ತುಂಬಾ ದಿನವಾಯಿತು. ನಮ್ಮ ಸೀತಾಲಕ್ಷ್ಮಿ ದೊಡ್ಡವಳಾದಾಗ ಮಾಡಿದ್ದು....ಹೂಂ ಮಲಗಿಕೋ ರಾತ್ರಿಯಾಯಿತು. ಅಂದ ಹಾಗೆ ಸಾತೂ, ಸ್ವಲ್ಪ ಆ ಬೀಸಣಿಗೆ ತಂದುಕೊಡು."

"ಬೀಸಲೆ ?"

"ಹೂಂ"

ಕಲ್ಯಾಣಿಗೆ ಅತ್ತೆ, ಮಾವನಾಡಿದ ಮಾತುಗಳು ಕೇಳಿಸಿದವು. ಅವಳು ರಾಮನಾಥನ ಕಡೆ ತಿರುಗಿದಳು. ಅವನಾಗಲೇ ಸಣ್ಣಗೆ ಗೊರಕೆಹೊಡೆಯುತ್ತಿದ್ದ.

ಕಲ್ಯಾಣಿ ನಿಟ್ಟುಸಿರಿನೊಂದಿಗೆ ಮತ್ತೊಂದು ಮಗ್ಗುಲಿಗೆ ಹೊರಳಿಕೊಂಡಳು.

ಬೆಳಿಗ್ಗೆ ಕಲ್ಯಾಣಿ ಏಳುವ ಹೊತ್ತಿಗಾಗಲೆ ಅತ್ತೆ-ಮಾವ ಅಡಿಗೆಯ ಮನೆಯಲ್ಲಿ ತಂಬ ಸಡಗರದಿಂದ ಓಡಿಯಾಡುತ್ತಿದ್ದರು.

'ಹೆಣ್ಣು ಮಕ್ಕಳ ಮದುವೆಗೂ ಅವರಿಷ್ಟು ಸಂಭ್ರಮಪಟ್ಟಿರಲಾರರು' ಎಂದುಕೊಂಡಳು ಕಲ್ಯಾಣಿ.

ಶೇಷಯ್ಯನವರು ಪಂಚೆಯನ್ನು ಎತ್ತಿ ಮೇಲಕ್ಕೆ ಕಟ್ಟಿ ಶಾವಿಗೆ ಒತ್ತಿದರು.

ವಯಸ್ಸಾದರೂ ಎಷ್ಟು ಉತ್ಸಾಹ !

ಊಟದಲ್ಲಿಯೂ ಅಷ್ಟೆ. ಆ ವೃದ್ಧ ದಂಪತಿಗಳು ತಿಂದ ಶಾವಿಗೆಯಲ್ಲಿನ ನಾಲ್ಕನೆಯ ಒಂದು ಭಾಗವನ್ನು ತಿನ್ನುವುದು ಸಹ ಕಲ್ಯಾಣಿಯಿಂದಾಗಲಿಲ್ಲ.

ಕಲ್ಲು ತಿಂದು ಅರಗಿಸಬೇಕಾದ ಯುವತಿ ಅವಳು. ಅತ್ತೆಯ ವಯಸ್ಸಿನಲ್ಲಿ ಮೂರನೆ ಒಂದು ವಯಸ್ಸೂ ಅವಳಿಗಾಗಿರಲಿಲ್ಲ.

ಆದರೂ ಆಕೆಯಂತೆ ಕೆಲಸ ಮಾಡಲಾರಳು, ತಿನ್ನಲಾರಳು, ಜೀವನದಲ್ಲಿ ಉತ್ಸಾಹ ತೋರಿಸಲಾರಳು. ಯಾಕೆ?

ರಾಮನಾಥ ತಾನೆ ಇನ್ನೇನು? ಶೇಷಯ್ಯನವರು ಒಂದು ದಿನಕ್ಕೆ ಕಡಿಮೆಯೆಂದರೆ ಹತ್ತು ಮೈಲಿಗಳಿಗೆ ಕಡಿಮೆಯಿಲ್ಲದೆ ತಿರುಗಿ ಬರುತ್ತಿದ್ದರು. ರಾಮನಾಥ ಎಲ್ಲಿಗೆ ಹೋಗಬೇಕಾದರೂ ಬಸ್ಸಿಗಾಗಿ ಗಂಟೆಗಟ್ಟಲೆ ಕಾದು ನಿಲ್ಲುತ್ತಿದ್ದ.

ಹಲಸಿನಹಣ್ಣು—ವಾಯು, ಮಾವಿನಹಣ್ಣು—ಉಷ್ಣ, ಬಾಳೇಹಣ್ಣು—ಶೀತ—ಹೀಗೆಯೆ ನಾನಾ ಕಾರಣಗಳಿಂದಾಗಿ ಅವನು ಸಾಧಾರಣವಾಗಿ ಎಲ್ಲ ಹಣ್ಣುಗಳಿಂದ ದೂರವಿರುತ್ತಿದ್ದ.

ಶೇಷಯ್ಯನವರು ಒಂದು ದಿನಕ್ಕೆ ಹತ್ತು ಮಾವಿನಹಣ್ಣುಗಳನ್ನು

ತಿಂದ ೨ ಅರಗಿಸಿಕೊಳ್ಳುತ್ತಿದ್ದರು.

ಒಟ್ಟಿನಲ್ಲಿ ಇಂದಿನ ಜನಾಂಗ ಇಷ್ಟೊಂದು ದುರ್ಬಲರಾಗಿ, ಸೋಮಾರಿಗಳಾಗಿ, ನಿರುತ್ಸಾಹಿಗಳಾಗಿರಲು ಕಾರಣ ?

ನಾಗರಿಕತೆಯೇ, ವಿದ್ಯಾಭ್ಯಾಸವೇ ? ವಿಜ್ಞಾನವೆ ? ಯಾವುದಿರಬಹುದು.

ಕೇವಲ ತಾವಿಬ್ಬರು ಮಾತ್ರವಲ್ಲ, ತಮ್ಮ ಸುತ್ತಲೂ ಇದ್ದ ತಮ್ಮ ವಯಸ್ಸಿನವರೂ ಹಿರಿಯರಂತೆ ಯಾವುದರಲ್ಲಿಯೂ ಉತ್ಸಾಹವನ್ನು ತೋರುತ್ತಿರಲಿಲ್ಲ.

ಇನ್ನ ಹಬ್ಬಗಳ ವಿಷಯಗಳಲ್ಲಂತೂ ಕಲ್ಯಾಣಿಗಾಗಲಿ, ರಾಮನಾಥನಿಗಾಗಲಿ ಸ್ವಲ್ಪವೂ ಶ್ರದ್ಧೆಯಿರಲಿಲ್ಲ.

ನಿಜ ಹೇಳುವುದೆಂದರೆ ಯಾವ ಹಬ್ಬ ಯಾವ ದಿನ ಬರುವುದೆಂಬುದು ಸಹ ಅವರಿಗೆ ಸರಿಯಾಗಿ ತಿಳಿಯುತ್ತಿರಲಿಲ್ಲ. ಅದನ್ನು ತಿಳಿದುಕೊಳ್ಳುವ ಆಸಕ್ತಿಯೂ ಅವರಿಗಿರಲಿಲ್ಲ.

ಗೌರಿ–ಗಣೇಶನ ಹಬ್ಬ ಬಂದಿತೆಂದರೆ ಅತ್ತೆ—ಮಾವನಿಗೆ ಎಷ್ಟೊಂದು ಉತ್ಸಾಹ !

ಶೇಷಯ್ಯನವರಂತೂ ತಾವೇ ಅಂಗಡಿಗೆ ಹೋಗಿ ಬಾಳೆಯ ಕಂಬಗಳನ್ನು ತಂದು ಗಣೇಷನನ್ನು ಕೂರಿಸಿ ಪೂಜೆ ಮಾಡಲು ಸುಂದರವಾದ ಮಂಟಪವನ್ನು ಕಟ್ಟಿ, ಅದಕ್ಕೆ ಬಣ್ಣದ ದೀಪಗಳನ್ನು ಹಾಕುತ್ತಿದ್ದರು.

ಬಾಗಿಲುಗಳಿಗೆ ಮಾವಿನೆಲೆಯ ತೋರಣ ಕಟ್ಟುವ ಭರಾಟೆಯೋ?

ರಾಮನಾಥನಿಗೆ ಆಗ ಎನಿಸುತ್ತಿತ್ತು–ಹಸಿರು ಬಟ್ಟೆಯಲ್ಲಿ ತೋರಣ ಹೊಲಿಸಿ ಬಾಗಿಲುಗಳಿಗೆ ಕಟ್ಟಿಬಿಟ್ಟರೆ ಹಬ್ಬ ಹಬ್ಬಕ್ಕೂ ತೋರಣ ಕಟ್ಟುವ ಪಂಚಾಯಿತಿ ಇರುವುದಿಲ್ಲ.

"ರಾಮೂ, ಬಾರೋ ಇಲ್ಲಿ, ಕುರ್ಚಿ ಹಿಡಿದುಕೊಳ್ಳೋ, ಅಥವಾ, ನೀನೇ ಕುರ್ಚಿ ಮೇಲೆ ಹತ್ತೋ, ತೋರಣ ತೀರ ಕೆಳಗೆ ಕಟ್ಟಿದೆಯಲ್ಲೋ, ತಲೆಗೆ ತಾಕದ ಹಾಗೆ ಇನ್ನೂ ಮೇಲೆ ಕಟ್ಟೋ....."

ಆಗ ರಾಮನಾಥನಿಗೆ 'ಸಾಕಪ್ಪ' ಎನ್ನಿಸುತ್ತಿತ್ತು. ತಂದೆಯ ಮಾತನ್ನು ಮೀರಿ ಹೋಗುವುದು ಸಾಧ್ಯವಿರಲಿಲ್ಲ, ತೋರಣ, ಮಂಟಪ

ಕಟ್ಟುವುದರಲ್ಲಿ ಶ್ರದ್ಧೆ ಇರಲಿಲ್ಲ. ಹೀಗಾಗಿ ಅವನು ಹಬ್ಬಗಳು ಬಂದರೆ ಒದ್ದಾಡಿಬಿಡುತ್ತಿದ್ದ.

ಅವರ ಮನೆಯಲ್ಲಿ ಗೌರಿ ಕೂರಿಸುವ ಪದ್ಧತಿ ಇರಲಿಲ್ಲವಾದ್ದರಿಂದ ಗೌರಿಯನ್ನು ಕೂರಿಸುವವರ ಮನೆಗೆ ಅತ್ತೆ, ಸೊಸೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಿದ್ದರು.

ಗೌರಿಯ ಹಬ್ಬ ಇನ್ನೂ ಹದಿನೈದು ದಿನವಿದೆ ಎನ್ನುವಾಗಿನಿಂದಲೂ ಸಾತಮ್ಮನಿಗೆ ಬಲು ಸಡಗರ.

ಮೊರಗಳ ಜೊತೆ ಅಣಿ ಮಾಡಿವುದು, ಗೆಜ್ಜೆವಸ್ತ್ರಗಳನ್ನು ತಯಾರು ಮಾಡಿ ಬಣ್ಣ ಬಣ್ಣದ ಹೊಳೆಯುವ ವರ್ತಿಗಳನ್ನು ಅಂಟಿಸುವುದು, ಮುಂತಾದ ಕೆಲಸಗಳನ್ನು ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ರಾತ್ರಿ ಹಗಲು ನಿದ್ದೆಗೆಟ್ಟು ತಯಾರು ಮಾಡುತ್ತಿದ್ದರು.

ಗೌರಿ, ಗಣಪತಿಗೆ ಆರತಿಯೆತ್ತುವ ತಟ್ಟೆಗಳಿಗೆ ಚಿತ್ರ ಕೆಲಸ ಮಾಡುವುದೆಂದರೆ ಆಕೆಗೆ ಎಲ್ಲಿಲ್ಲದ ಉತ್ಸಾಹ. ಚಾಳೀಶವಾದ್ದರಿಂದ ಕಣ್ಣಿಗೆ ಕನ್ನಡಕ ಹಾಕಿಕೊಂಡು ಬಿಸಲಿನಲ್ಲಿ ಕುಳಿತು ತಟ್ಟೆಯಲ್ಲಿ ಹಸೆ ಬರೆಯುತ್ತಿದ್ದರು.

ಆದರೆ ಸೊಸೆಗೋ ?

ಪ್ರತಿಯೊಂದು ಕೆಲಸಲ್ಲಿಯೂ ತಾತ್ಸಾರ. ಸುಲಭವಾಗಿ ಆಗುವ ಕೆಲಸಗಳಿಗೆ ಇವರು ಯಾಕೆ ಇಷ್ಟೊಂದು ಶ್ರಮ ಪಡುವರೋ ಎಂದು ಬೇಸರ.

ಆರತಿ ತಟ್ಟೆಗೆ ಹಸೆ ಬರೆಯುವುದರಿಂದ ಆಗುವ ಲಾಭವಾದರೂ ಏನು? ಚಿತ್ರವಿಚಿತ್ರವಾದ ವರ್ತಿಗಳು ಯಾಕೆ? ಎಲ್ಲವೂ ವ್ಯರ್ಥ ಅಲ್ಲವೆ ?

ಭಕ್ತಿಯಿದ್ದೆಡೆ ಶ್ರದ್ಧೆ ಇರಬೇಕೆಂದು ಸಾತಮ್ಮನ ಅಭಿಪ್ರಾಯ. ಹಬ್ಬದ ದಿನವಂತೂ ಆಕೆ ಬೆಳಗಿನ ಜಾವ ಮೂರು ಗಂಟೆಗೆ ಎದ್ದು ಎಂಟು ಗಂಟೆಯೊಳಗೆ ಹಬ್ಬದ ಅಡಿಗೆಯನ್ನೆಲ್ಲಾ ಪೂರಯಿಸಿ ನಂತರ ತಮ್ಮ ಅಲಂಕಾರವನ್ನು ಮಾಡಿಕೊಳ್ಳುತ್ತಿದ್ದರು.

ನರೆತ ತಲೆಗೂದಲನ್ನು ಓರಣವಾಗಿ ಬಾಚಿ ಹೆರಳು ಹಾಕಿಕೊಂಡು, ಹೆರಳಿನ ನಡುವೆ ಕೆಂಪಿನ ಜಡೆಬಿಲ್ಲೆಯನ್ನು ಸಿಕ್ಕಿಸಿಕೊಂಡು ತಲೆಗೆ ತಾಳೆ ಹೂವು, ದವನ ಸಿಕ್ಕಿಸಿಕೊಳ್ಳುತ್ತಿದ್ದರು.

ಕೆನ್ನೆಯ ತುಂಬಾ ಅರಶಿನ, ಹಣೆಗೆ ಅಗಲವಾಗಿ ಕುಂಕುಮ ಹಚ್ಚಿ, ತಮ್ಮ ಮದುವೆಯ ಬೂಟಾ ಹೂವಿನ ಸೀರೆಯುಟ್ಟು ಪೂಜೆಗೆ ಹೊರಡುತ್ತಿದ್ದರು.

ಪೂಜೆ ಮುಗಿಯುವವರೆಗೆ ಅವರು ಕಲ್ಯಾಣಿಗೆ ಕಾಫಿಯನ್ನು ಸಹಿತ ಕೊಡುತ್ತಿರಲಿಲ್ಲ. ಕಾಫಿಯಿಲ್ಲದೆ ತಲೆನೋವಿನಿಂದ ಕಲ್ಯಾಣಿ ಒದ್ದಾಡುತ್ತಿದ್ದಳು.

ಸೊಸೆಯನ್ನೂ ಅಡಿಯಿಂದ ಮುಡಿಯವರೆಗೆ ಅಲಂಕರಿಸಿ ತನ್ನೊಡನೆ ಪೂಜೆಗೆ ಕರೆದೊಯ್ಯಬೇಕೆಂದು ಅತ್ತೆಗೆ ಆಸೆ.

ಕಲ್ಯಾಣಿ ಸಾಧಾರಣವಾದುದೊಂದು ಸಿಲ್ಕ್ ಸೀರೆಯುಟ್ಟು ಪೂಜೆಗೆ ಹೊರಟಾಗ ಆಕೆ ಹೇಳಿದರು.

"ಅಂಚು, ಸೆರಗು ಇರುವ ಧರ್ಮಾವರದ ಸೀರೆ ಉಟ್ಟುಕೋ; ಒಡವೆಗಳನ್ನು ಹಾಕಿಕೋ."

"ಬೇಡ ಅತ್ತೆ. ಒಡವೆ ಭಾರ."

"ಸಾರ್ಥಕವಾಯಿತು. ಗೌರಮ್ಮ ಬರುವುದು ವರ್ಷಕ್ಕೊಂದು ಸಲ. ಆಗಲೂ ನಾವು ಸಂಭ್ರಮ ಪಡಬೇಡವೇ?"

ಕಲ್ಯಾಣಿ ಗೊಣಗುತ್ತಾ ಹೋಗಿ ಅತ್ತೆ ಹೇಳಿದಂತೆ ಅಲಂಕರಿಸಿಕೊಳ್ಳುತ್ತಿದ್ದಳು. ಮನಸ್ಸಿನ ತುಂಬಾ ಬೇಸರ ಅಸಮಾಧಾನ ತುಂಬಿಕೊಂಡು ಹೋಗಿ ಗೌರಿಯನ್ನು ಪೂಜಿಸುತ್ತಿದ್ದಳು. ಪೂಜೆ ಮಾಡುವಾಗಲೂ ಒಂದೇ ಯೋಚನೆ—

ಎಂದಿಗೆ ಮನೆಗೆ ಹೋಗಿ ಕಾಫಿಯನ್ನು ಕುಡಿದು ತಲೆನೋವು ಕಳೆದುಕೊಂಡೇನೋ.

ಆದರೆ ಸಾತಮ್ಮನಿಗೆ ಸೊಸೆಯಷ್ಟು ಮನೆಗೆ ಹೋಗುವ ಆತುರವಿಲ್ಲ. ಅವರು ಭಕ್ತಿಯಿಂದ, ಶ್ರದ್ಧೆಯಿಂದ ಸಿಧಾನವಾಗಿ ಪೂಜೆ ಮಾಡಿ, ಜೋಯಿಸರು ಆತುರದಿಂದ ಮಂತ್ರಲೋಪ ಮಾಡಿದರೆ

'ಪೂರ್ಣಫಲ ಗೌರಮ್ಮನಿಗೆ ಕೊಡಿಸಲಿಲ್ಲ ಶಾಸ್ತ್ರಿಗಳೇ, ತುಂಬಾ ಆತುರ ಮಾಡ್ತೀರಿ' ಎಂದು ಅವರಿಗೆ ಮಂತ್ರಗಳ ನೆನಪು ಮಾಡಿಕೊಟ್ಟು, ಸಾಂಗವಾಗಿ ಪೂಜೆ ಮಾಡಿ, ಅಲ್ಲಿಗೆ ಬಂದಿದ್ದವರು ತಮ್ಮ ಮನೆಗಳಲ್ಲಿ ಹಬ್ಬದ

ಅಡಿಗೆ ಏನೇನು ಮಾಡಿರುವರೆಂದು ಕೇಳಿ ತಿಳಿದು, ತಾವು ಮರದ ಜೊತೆಯನ್ನು ಕೊಟ್ಟು, ಸೊಸೆಯ ಕೈಲಿ ಕೊಡಿಸಿ, ಮುತ್ತೈದೆಯರಿಗೆ ಅಡ್ಡ ಬಿದ್ದು ಮನೆ ಸೇರುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡು ಗಂಟೆಯಾಗಿ ಬಿಡುತ್ತಿತ್ತು.

ಅಷ್ಟು ಹೊತ್ತಿಗೆ ಕಲ್ಯಾಣಿಗೆ 'ಕಾಫಿಯೂ ಬೇಡ. ಮನೆಗೆ ಹೋಗಿ ಮಲಗಿಕೊಂಡರೆ ಸಾಕು' ಎನಿಸಿಬಿಡುತ್ತಿತ್ತು.

ಗೌರಿಯ ಪೂಜೆಯಲ್ಲಿ ಸೊಸೆಗಿದ್ದ ಅನಾಸಕ್ತಿ ಕಂಡು ಸಾತಮ್ಮನಿಗೆ ಕೆಲವು ವೇಳೆ ಕೋಪ ಬರುತ್ತಿತ್ತು. ಆದರೆ ಅದನ್ನು ಆಕೆ ಹಾಗೆಯೇ ನುಂಗಿಕೊಳ್ಳುತ್ತಿದ್ದರು.

ಆಕೆಯ ಸೂಕ್ಷ್ಮ ಕಣ್ಣುಗಳು ಮಗ, ಸೊಸೆ ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ಅನಾಸಕ್ತಿ ತೋರುವುದನ್ನು ಗಮನಿಸಿದ್ದವು.

ವಯಸ್ಸಾದ ತಾವು ಜೀವನದಲ್ಲಿ ತೋರುವ ಶ್ರದ್ಧೆಯೂ ಅವರಿಗೆ ಇಲ್ಲವೆಂದರೆ ?

ಯಾಕೆ ಹೀಗೆ ಎಂದು ಅವರು ಒಮ್ಮೊಮ್ಮೆ ಪ್ರಶ್ನಿಸಿಕೊಳ್ಳುತ್ತಿದ್ದರು.

ತಮಗೆ ಬದನೆಕಾಯಿ ಎಣ್ಣೆಗಾಯಿ ಮಾಡುವುದರಲ್ಲಿ ಇದ್ದ ಉತ್ಸಾಹ ಕಲ್ಯಾಣಿಗೆ ಬದುಕಿನಲ್ಲಿರಲಿಲ್ಲ. ಶೇಷಯ್ಯನವರಿಗೆ ಹೆಂಡತಿಗೆ ಹುಳಿಗೆ ತಿರುವಿಕೊಡುವುದರಲ್ಲಿದ್ದ ಶ್ರದ್ಧೆ ರಾಮನಾಥನಿಗೆ ಜೀವನದಲ್ಲಿರಲಿಲ್ಲ.

ಶೇಷಯ್ಯ ತಾವು ಅಮರರು, ಚಿರಂಜೀವಿಗಳು ಎನ್ನುವಂತೆ ಕಾಸಿಗೆ ಕಾಸು ಕೂಡಿಹಾಕಿ ಹಿಗ್ಗುತ್ತಿದ್ದರು. ರಾಮನಾಥ 'ನಾಳೆಯೇನು ಶಾಶ್ವತ? ಇವತ್ತು ನಮ್ಮದು' ಎನ್ನುವಂತೆ ವರ್ತಿಸುತ್ತಿದ್ದ.

ಹೀಗೇಕೆ ?

ಒಂದು ಚೂರು ಹೂವು ಸಿಕ್ಕಿದರೆ ಆ ನರೆತ ತಲೆಗೂ ಸಿಕ್ಕಿಸಿಕೊಳ್ಳುವ ಚಪಲ ಸಾತಮ್ಮನಿಗೆ. ಮಲ್ಲಿಗೆಯ ದಂಡೆ ಹೂವಿನಬುಟ್ಟಿಯಲ್ಲಿಯೇ ಬಾಡುತಿದ್ದರೂ ಕಲ್ಯಾಣಿ ಸುಮ್ಮನಿರುತ್ತಿದ್ದಳು.

ಯಾವುದು ಮಾಡಿದರೂ ಅತಿವೃಷ್ಟಿ–ಇಲ್ಲದಿದ್ದರೆ ಅನಾವೃಷ್ಟಿ. ಮದುವೆಯಾದ ತರುಣದಲ್ಲಿ ಪ್ರೀತಿಯ ಪ್ರದರ್ಶನ ಅತಿಯಾಗಿ ನಡೆಸಿ

ನಂತರ ಇದ್ದಕ್ಕಿದ್ದಂತೆ ನೂತನ ದಂಪತಿಗಳು ಆರಿ ತಣ್ಣಗಾಗಿ ಹೋಗಿದ್ದರು.

ಅವರ ಪ್ರೇಮ ಲೋಹದಂತೆ, ಬಿಸಿಯಾಗುವುದೂ ಬೇಗ—ಆರುವುದೂ ಬೇಗ.

ಪ್ರೇಮ ಬಿಸಿಯಾಗಿದ್ದಾಗ ಪರಸ್ಪರರಿಗೆ ಬೇಸರವಾಗುವಷ್ಟು, ಜುಗುಪ್ಸೆಯಾಗುವಷ್ಟು ಒಡನಾಟ. ಅತಿಯಾಗಿ ಬಳಸಿದ ಪ್ರೀತಿಯ ಬಟ್ಟಲು ಬಹು ಬೇಗ ಬರಿದಾಗುತ್ತಿತ್ತು. ಅನಂತರ ಎಲ್ಲವೂ ಯಾಂತ್ರಿಕ, ನಾಟಕೀಯ.

ತಮ್ಮಂತೆ ಯಾವುದರಲ್ಲಿಯೂ ಮಿತಿಯಿಲ್ಲ, ಹತೋಟಿಯಿಲ್ಲ.

ತಮಗೆ ಮದುವೆಯಾದಾಗ ?

ಸಾತಮ್ಮ ತಮ್ಮ ಮದುವೆಯ ಚಿತ್ರವನ್ನು ಕಣ್ಣೆದುರಿಗೆ ತಂದು ನಿಲ್ಲಿಸಿಕೊಂಡರು.

ಅವರಿಗೆ ಮದುವೆಯಾದಾಗ ಎಂಟು ವರ್ಷ. ಶೇಷಯ್ಯನವರಿಗೆ ಹದಿನಾಲ್ಕು ವರ್ಷ. ಗೊಂಬೆಯಾಟ ಆಡುತ್ತಿದ್ದ ಹುಡುಗಿಗೂ, ಗೋಲಿ ಬುಗುರಿಯಾಡುತ್ತಿದ್ದ ಹುಡುಗನಿಗೂ ಹಿರಿಯರು ಮದುವೆ ಮಾಡಿದ್ದರು.

ಬೆಳೆಯುವ ಪೈರು ಮೊಳಕೆಯಲ್ಲೇ ಎಂಬಂತೆ ಶೇಷಯ್ಯನವರು ಆ ವಯಸ್ಸಿನಲ್ಲೇ ನಾಲಿಗೆಯ ಚಾಪಲ್ಯ, ಹೊಟ್ಟೆಯ ಆತುರ ಹಾಗೂ ಹಣ ಕಾಸಿನಮೇಲೆ ತಮಗಿದ್ದ ಅಪಾರ ಪ್ರೇಮವನ್ನು ವ್ಯಕ್ತಪಡಿಸಿದರು.

ಧಾರೆಯ ದಿನ ಊಟ ಹೊತ್ತಾಯಿತೆಂದು ಶೇಷಯ್ಯ ರಚ್ಚೆ ಹಿಡಿದಾಗ ಅವರ ತಂದೆ ಮೂರುಕಾಸಿನ ಹೊಸಬಿಲ್ಲೆಗಳನ್ನು ಅವರ ಬೊಗಸೆಯ ತುಂಬ ತುಂಬಿ ಮಗನನ್ನು ಸುಮ್ಮನಾಗಿಸಿದ್ದರು.

ಮತ್ತೊಮ್ಮೆ ಮಜ್ಜಿಗೆ ನೀರಾಯಿತೆಂದು ಆತ ಚಂಡಿ ಹಿಡಿದಾಗ ಅವರು ಉಂಡೆಯ ನಾಲ್ಕಾಣೆಯನ್ನು ಮಗನ ಕೈಗೆ ಹಾಕಿದ್ದರು.

ಆರತಿಯ ಸಮಯದಲ್ಲಿ ವಧುವಿಗೆ ರೂಮಿನಲ್ಲಿರಿಸಿದ್ದ ಬಾಳೆಯ ಗೊನೆಯದೇ ನೆನಪಾದರೆ, ವರನಿಗೆ ತಾನು ತಾಯಿಯ ಕೈಲಿ ಕೊಟ್ಟ ನಾಲ್ಕಾಣೆಯದೇ ಧ್ಯಾನ.

ಸಧ್ಯ ಆರತಿ ಮುಗಿದರೆ ಸಾಕೆಂದು ಇಬ್ಬರೂ ಕಾಯುತ್ತಿದ್ದರು. ಆರತಿ ಮುಗಿದೊಡನೆ ವಧು ಬಾಳೆಯ ಹಣ್ಣಿನಾಸೆಗಾಗಿ ಓಡಿಹೋದರೆ, ವರ ತನ್ನ ನಾಣ್ಯದ ಸುರಕ್ಷತೆಯನ್ನು ನೋಡಲು ತಾಯಿಯೆಡೆಗೆ ಧಾವಿಸುತ್ತಿದ್ದ.

ನಂತರ ವರ, ವಧುವಿನ ನಡುವೆ ಯಾವ ವಿಧವಾದ ಪತ್ರ ವ್ಯವಹಾರವೂ ಇರುತ್ತಿರಲಿಲ್ಲ. ಹಿರಿಯರು ಒಬ್ಬರಿಗೊಬ್ಬರು ಕ್ಷೇಮ ಸಮಾಚಾರದ ಬಗ್ಗೆ ಪತ್ರ ಬರೆಯುತ್ತಿದ್ದರೇ ಹೊರತು ಸಾತಮ್ಮನಿಗೆ ಪತಿಯಿಂದ ಒಂದು ಕಾಗದ ಬಂದ ನೆನಪೂ ಇರಲಿಲ್ಲ.

ಮದುವೆಯಾದ ಐದು ವರ್ಷಗಳ ಕಾಲ ಸಾತಮ್ಮ ತನ್ನ ಸಮಯವನ್ನು ಮಂಗಳಗೌರಿ ವ್ರತ, ಮೌನಗೌರಿ ವ್ರತ, ದ್ವಾದಶಿ ಎಲೆ ಅಡಿಕೆ, ತದಿಗೆ ಗೌರಿ, ಸಂಕ್ರಾಂತಿ ಬಾಗಿನ ಇತ್ಯಾದಿಗಳಲ್ಲಿ ಕಳೆದಿದ್ದರು.

ದೀಪಾವಳಿಯ ಅಳಿಯತನ ಶೇಷಯ್ಯನವರಿಗೆ ನಡೆದರೂ ಚಿಕ್ಕ ವಯಸ್ಸಿನಿಂದಾಗಿ ಹೆಂಡತಿಯೊಡನೆ ಮಾತನಾಡುವ ಆಸೆ ಆತನಿಗಿರಲೇ ಇಲ್ಲ.

ಆಕೆಗೂ ಅಷ್ಟೆ–ಏನೋ ಒಂದು ಬಗೆಯ ಸಂಕೋಚ.

ಶೇಷಯ್ಯನವರಿಗೆ ಕೆಲಸವಾದೊಡನೆ ಸಾತಮ್ಮ ಗಂಡನ ಮನೆಗೆ ಬಂದಿದ್ದರು. ಆಗಲೂ ಅಷ್ಟೆ–ಆಕೆ ಹಗಲು ಹೊತ್ತಿನಲ್ಲಿ ಗಂಡನ ಮುಖವನ್ನು ಕಣ್ಣೆತ್ತಿ ನೋಡಲೂ ನಾಚುತ್ತಿದ್ದರು. ಹಿರಿಯರೆಂದು ಆಕೆ ಗಂಡನೊಡನೆ ಮಾತುಕತೆಯಾಡುವುದಂತೂ ಬಹು ದೂರವೇ ಉಳಿಯಿತು.

ರಾತ್ರಿಯ ಹೊತ್ತಿನಲ್ಲಿ ಮಾತ್ರ ಆಕೆಗೆ ಪತಿದೇವರ ದರ್ಶನವಾಗುತ್ತಿತ್ತು. ಅದೂ ಅತ್ತೆ 'ಸಾತೂ ಮಲಗಿಕೋ ಹೋಗಮ್ಮ' ಎಂದ ಮೇಲೆ.

ಅತ್ತೆ ಹಾಗೆ ಹೇಳಿದ್ದ ದಿನ ಸಾತಮ್ಮನಿಗೆ ತಾನಾಗಿಯೇ ಗಂಡನ ಬಳಿಗೆ ಹೋಗಲೂ ಅಂಜಿಕೆ. ಆಗ ಆಕೆ ಅಡಿಗೆಯ ಮನೆಯ ಒಂದು ಮೂಲೆಯಲ್ಲಿಯೇ ಚಾಪೆ ಬಿಡಿಸಿಕೊಂಡು ಮಲಗುತ್ತಿದ್ದಳು.

ಹಿರಿಯರಿರುವವರೆವಿಗೂ ಅವರಿಬ್ಬರೂ ಒಬ್ಬರಿಗೊಬ್ಬರು ತೀರ ಅಪರಿಚಿತರಾಗಿಯೇ ಉಳಿದರು. ಒಂದೇ ಮನೆಯಲ್ಲಿ ಸಂಸಾರ ಮಾಡುತ್ತಿದ್ದರೂ

ರಾತ್ರಿ ಎರಡು ಮಾತನಾಡುವುದರ ಹೊರತು ಹೆಚ್ಚು ಮಾತು ಸಹ ಆಡು ತ್ತಿರಲಿಲ್ಲ. ಸಾತಮ್ಮನಿಗೆ ಎರಡು ಹೆಣ್ಣು ಮಕ್ಕಳಾಗುವವರೆವಿಗೂ ಅವರು ದೂರವೇ ಇದ್ದರು.

ಹಿರಿಯರು ಹೋದನಂತರ, ಸಾತಮ್ಮನೇ ಮನೆಯ ಯಜಮಾನಿ ಯಾ ದಮೇಲೆ ಮಕ್ಕಳ ತಾಪತ್ರಯ, ಲಾಲನೆ ಪಾಲನೆಯಿಂದಾಗಿ ಆಗಲೂ ಸಾತಮ್ಮ ಗಂಡನಿಂದ ದೂರವೇ ಆದರು.

ಆಕೆಗೆ ಬಿಡುವಿದ್ದಾಗ ಶೇಷಯ್ಯನವರಿಗೆ ಹೊರಗೆ ಕೆಲಸ, ಗೆಳೆಯರು ಇತ್ಯಾದಿ. ಆತನಿಗೆ ಬಿಡುವಿದ್ದಾಗ ಆಕೆಗೆ ಮನೆಗೆಲಸ, ಮಕ್ಕಳ ಪೋಷಣೆ.

ಹೀಗಾಗಿ ಗಂಡ ಹೆಂಡರಿಗೆ ಪರಸ್ಪರರಲ್ಲಿದ ಆಕರ್ಷಣೆ, ಕುತೂಹಲ ತಣ್ಣಗಾಗಲೇ ಇಲ್ಲ.

ಈ ಗಳಿಗೆಗೂ ಸಾತಮ್ಮ ಒಂದು ಗಳಿಗೆ ವಿರಾಮವಾಗಿ ಕುಳಿತರೆ ಸಾಕು, ಶೇಷಯ್ಯ ಹೋಗಿ ಹೆಂಡತಿಯ ಮುಂದೆ ಕುಳಿತುಕೊಳ್ಳು ತ್ತಿದ್ದರು. ಆಗ ಆಕೆ ಚಾಪೆಯ ಮೇಲೆ ನೀಡಿದ್ದ ಕಾಲುಗಳನ್ನು ತಟ್ಟನೆ ಹಿಂದೆಳೆದುಕೊಳ್ಳುತ್ತಿದ್ದರು.

ಅರಿಶಿನದ ಲೇಪನದಿಂದಾಗಿ ಬಣ್ಣಗಿರುತ್ತಿದ್ದ ಆಕೆಯ ಕಾಲುಗಳನ್ನು ನೋಡುತ್ತಾ ಶೇಷಯ್ಯ,

"ಇರಲಿ ಬಿಡು" ಎನ್ನುತ್ತಿದ್ದರು.

"ಸಧ್ಯ ಸುಮ್ಮನಿರಿ. ನಿಮ್ಮ ಮಾತು ಕೇಳಿ ಯಾರಾದರೂ ನಕ್ಕಾರು."

ಅವರು ಆಗ ವಿರಾಮವಾಗಿ ಚರ್ಚಿಸುತ್ತಿದ್ದ ವಿಷಯ ಮಾರನೆಯ ದಿನಕ್ಕೆ ಏನಡಿಗೆ ಮಾಡುವುದೆಂದು.

"ನಾಳಿಗೆ ಏನು ತರಕಾರಿ ಇದೆ?"

"ಹಲಸಿನ ಕಾಯಿದೆ. ಕಡಲೆಕಾಳು ತಂದರೆ ಎರಡನ್ನೂ ಹಾಕಿ ಹುಳಿ ಮಾಡಬಹುದು."

ನಂತರ ಹುಳಿಯ ತಯಾರಿಕೆಯ ಬಗ್ಗೆ ಇಬ್ಬರಿಗೂ ದೀರ್ಘ ಚರ್ಚೆ ನಡೆಯುತ್ತಿತ್ತು.

ಕೊನೆಗೆ ಜೊತೆಗೆ ಸಂಡಿಗೆಯನ್ನೂ ಕರಿಯಬೇಕೆಂದು ಗಂಡ ಹೆಂಡಿ

ರಿಬ್ಬರೂ ಒಂದು ಒಪ್ಪಂದಕ್ಕೆ ಬಂದು ರಾಜಿಯಾಗುತ್ತಿದ್ದರು.

ಇಲ್ಲದಿದ್ದರೆ ಶೇಷಯ್ಯ ಕನ್ನಡಕವನ್ನು ಹಾಕಿಕೊಂಡು ಹೆಂಡತಿಗೆ ರಾಮಾಯಣ, ಮಹಾಭಾರತ, ಭಾಗವತ ಮುಂತಾದುವುಗಳನ್ನೆಲ್ಲ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ಓದಿ ಹೇಳುತ್ತಿದ್ದರು.

ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವಾಗ ಸಾತಮ್ಮನ ಹೆಣ್ಣೆದೆ ತಾಯ್ತನದಿಂದ ತುಂಬಿ ಬರುತ್ತಿತ್ತು.

'ನಮ್ಮ ಮಕ್ಕಳೇ ನಮಗೆ ಇಷ್ಟು ಮುದ್ದಾಗಿ ಕಾಣುವಾಗ ಇನ್ನು ಆ ಭಗವಂತ ಕೃಷ್ಣನ ಅವತಾರ ತಾಳಿ ಬಾಲಲೀಲೆಗಳನ್ನು ಆಡಿದಾಗ ಎಷ್ಟು ಮುದ್ದಾಗಿರಬಹುದು? ದೇವಕಿಗಿಂತಲೂ ಸಾಕುತಾಯಿ ಯಶೋದೆಯೇ ಧನ್ಯೆ. ಅಲ್ಲವೇಂದ್ರೆ?'

'ಹೌದು' ಎಂದು ಹೆಂಡತಿಯ ಮಾತಿಗೆ ಶೇಷಯ್ಯ ತಲೆದೂಗುತ್ತಿದ್ದರು.

ರಾವಣ ಸೀತಾದೇವಿಯನ್ನು ಅಪಹರಿಸಿದಾಗ, ಸೀತೆ ರಾವಣನ ಅಶೋಕ ವನದಲ್ಲಿ ಪತಿವಿರಹದಿಂದ ಸಂಕಟಪಡುತ್ತಿದ್ದಾಗ ಸಾತಮ್ಮನ ಕಣ್ಣಿನಿಂದ ಕಂಬನಿಯುಕ್ಕುತ್ತಿತ್ತು. ಅದನ್ನು ಓದುವಾಗ ಶೇಷಯ್ಯನವರ ದನಿಯೂ ಗದ್ಗದವಾಗುತ್ತಿತ್ತು.

ಅವರ ಪಾಲಿಗೆ ಎಲ್ಲವೂ ಸತ್ಯ.

ಒಮ್ಮೆ ಕಲ್ಯಾಣಿ ಅತ್ತೆಯ ಕಣ್ಣೀರನ್ನು ಕಂಡು ಆಶ್ಚರ್ಯ ಪಟ್ಟಿದ್ದಳು.

'ಸೀತೆಯ ಕತೆ ಕೇಳಿ ಇವರೇಕೆ ಹೀಗೆ ಅಳುತ್ತಾರೆ? ಅದು ಬರಿಯ ಕತೆಯಲ್ಲವೇ? ಅಜ್ಞಾನಿಗಳು.'

ಅವಳಿಗಂತೂ ಸೀತೆಯ ಕತೆ ಕೇಳಿದಾಗ ಕಣ್ಣು ಚಿವುಟಿಕೊಂಡರೂ ಅಳು ಬರುತ್ತಿರಲಿಲ್ಲ.

ದೇವರಲ್ಲಿದ್ದ ಅಚಲ ವಿಶ್ವಾಸ, ದೃಢನಂಬಿಕೆ, ತಮ್ಮ ಸಂಸಾರದಲ್ಲಿದ್ದ ಶ್ರದ್ಧೆ, ಆಸಕ್ತಿ, ಪತಿಯಲ್ಲಿದ್ದ ಭಕ್ತಿ, ಮಕ್ಕಳಲ್ಲಿದ್ದ ಪ್ರೀತಿ ಇವುಗಳಿಂದಾಗಿ ಆ ಹಿರಿಯರಿಗೆ ಜೀವನ ನಿತ್ಯ ನೂತನ.

ಆದರೆ ಕಿರಿಯರಿಗೋ?

ಮದುವೆಯಾಗುವ ಹೊತ್ತಿಗೇ ಇಬ್ಬರೂ ಪ್ರಾಪ್ತವಯಸ್ಕರು. ಹೆಣ್ಣಿನ ನೋಟಕ್ಕಾಗಿ ಗಂಡು, ಗಂಡಿನ ಸಂಗಕ್ಕಾಗಿ ಹೆಣ್ಣು ಕಾತರಿಸುವ ವಯಸ್ಸನ್ನು ಅವರಿಬ್ಬರೂ ಮುಟ್ಟಿದ್ದರು.

ಸಂಜೆಯ ಆರತಿ ಮುಗಿದು ಏಳುವ ಹೊತ್ತಿಗೆ, ಹಸೆಮಣೆಯಿಂದ ಕಾಲ್ತೆಗೆಯುವ ಹೊತ್ತಿಗೇ ಇಬ್ಬರೂ ಸಂಪೂರ್ಣ ಪರಿಚಿತರು.

ಹದಿನೈದು ದಿನ ಗಂಡ, ಹೆಂಡತಿ ದೂರವಿದ್ದಾಗ ಪತ್ರಗಳ ಮುಖೇನ ಮತ್ತಷ್ಟು ಪರಿಚಯ, ಪ್ರೇಮದ ನಿವೇದನ, ಆಸೆ ಆಕಾಂಕ್ಷೆಗಳ ಪ್ರದರ್ಶನ.

ನಂತರ ಪರಸ್ಪರ ಒಡನಾಟ, ಅರೆಗಳಿಗೆಯೂ ಒಬ್ಬರನ್ನೊಬ್ಬರು ಅಗಲದೆ, ಮೂರು ತಿಂಗಳಲ್ಲಿ ಹದಿನೈದು ವರ್ಷಗಳ ಕಾಲದ ಅನುಭವ ಪಡೆಯುತ್ತಿದ್ದರು.

ಅನಂತರ ಪರಸ್ಪರರಲ್ಲಿ ಆಕರ್ಷಣೆ ತಗ್ಗುತ್ತಿತ್ತು, ಯೌವನದ ಕಾವು ಅಳಿದು ಎಲ್ಲವೂ ಹಳೆಯದಾಗಿ, ಹಳಸಿದುದಾಗಿ ತೋರುತ್ತಿತ್ತು.

ಯಾವುದೋ ವಿಚಿತ್ರ ರೀತಿಯ ವಿದ್ಯಾಭ್ಯಾಸದಿಂದಾಗಿ ಯಾವುದರಲ್ಲಿಯೂ ನಂಬಿಕೆಯಿಲ್ಲ. ಎಲ್ಲವನ್ನೂ 'ಯಾಕೆ' ಎಂದು ಪ್ರಶ್ನಿಸುವ ಧೋರಣೆ. ಒಂದು ಬಗೆಯ ತ್ರಿಶಂಕು ಜೀವನ.

ಕಲ್ಯಾಣಿ ಬಿ. ಎಸ್‌ಸಿ. ಪದವೀಧರೆ. ಅವಳು ಕಣ್ಣಲ್ಲಿ ಎಣ್ಣೆ ಬಿಟ್ಟುಕೊಂಡು ರಾತ್ರಿಯೆಲ್ಲಾ ನಿದ್ದೆಗೆಟ್ಟು ಓದಿದ್ದ ಕೆಮಿಸ್ಟ್ರಿಯಿಂದ ಈಗ ಅವಳಿಗಾಗುತ್ತಿರುವ ಲಾಭವೇನು ?

ಅವಳಿಗೆ ಈಗ ತನ್ನ ನಿಜ ಜೀವನದಲ್ಲಿ ಕೆಮಿಸ್ಟ್ರಿಯಿಂದ ಏನಾದರೂ ಉಪಯೋಗವಾಗಿದೆಯೇ ? ಅಷ್ಟೊಂದು ಕಷ್ಟಪಟ್ಟು ಓದಿದ್ದ ಆ ವಿಷಯ ಈಗ ಅವಳಿಗೆ ಸಂಪೂರ್ಣವಾಗಿ ಮರೆತುಹೋಗಿತ್ತು.

ಕಪ್ಪೆ, ಮಣ್ಣುಹುಳುಗಳನ್ನು ಕೊಯ್ದು ಅವುಗಳ ದೇಹದ ಒಳಗುಟ್ಟನ್ನು ಅರಿತಿದ್ದ ಅವಳಿಗೆ ತನ್ನ ಹೃದಯವನ್ನು ಹೊಕ್ಕು ನೋಡುವ ಶಕ್ತಿಯಿರಲಿಲ್ಲ. ಆ ಸಣ್ಣ ಪುಟ್ಟ ಪ್ರಾಣಿಗಳನ್ನು ಕೊಯ್ದ ಅವಳಿಗೆ ಒಂದು ತರಕಾರಿಯನ್ನು ನೆಟ್ಟಗೆ ಹೆಚ್ಚಲು ಬರುತ್ತಿರಲಿಲ್ಲ. ಕಪ್ಪೆಯನ್ನು ಬಹಳ ಜಾಗರೂಕತೆಯಿಂದ ಕತ್ತರಿಸಿದ ಅವಳು ಇವತ್ತಿಗೂ ಕೊಬ್ಬರಿ ತುರಿಯಲು ಹೋದರೆ ಕೈ ತುರಿದುಕೊಳ್ಳುತ್ತಿದ್ದಳು.

ಬೆರಿಕೆ ಸೊಪ್ಪಿಗೂ, ಕಿರಿಕಿರಿ ಸೊಪ್ಪಿಗೂ ವ್ಯತ್ಯಾಸ ತಿಳಿಯದ ಕಲ್ಯಾಣಿ ಬಾಟನಿಯಲ್ಲಿ ನೂರಕ್ಕೆ ಅರವತ್ತೈದು ನಂಬರನ್ನು ಗಳಿಸಿದ್ದಳು.

ಆದರೆ ಅವುಗಳಿಂದ ಈಗ ಅವಳಿಗಾಗಿರುವ ಲಾಭವೇನು! ಪರೀಕ್ಷೆಯಲ್ಲಿ ಪಾಸಾಯಿತೆಂಬ ಸುದ್ದಿ ಬಂದ ಮೇಲೆ ಅವಳು ತನ್ನ ನೋಟ್ಸುಗಳನ್ನೆಲ್ಲಾ ಹಳೆಯ ಪೇಪರಿನವನಿಗೆ ಮಾರಿಬಿಟ್ಟಿದ್ದಳು.

ಅಷ್ಟೊಂದು ಕಷ್ಟಪಟ್ಟು ಓದಿದ ವಿಷಯಗಳು, ಬಿಸಿಲು, ಮಳೆ, ಗಾಳಿಯೆನ್ನದೆ ಕಾಲೇಜಿಗೆ ಅಲೆದಾಡಿ ತಿಳಿದುಕೊಂಡ ವಿಷಯಗಳು, ಹೊತ್ತು ಗೊತ್ತಿಗೆ ಊಟ, ತಿಂಡಿ, ನಿದ್ದೆಯಿಲ್ಲದೆ ಅಭ್ಯಸಿಸಿದ ವಿಷಯಗಳವು–ಯಾವ ಪುರುಷಾರ್ಥಕ್ಕಾಗಿಯೋ? ಏನನ್ನು ಸಾಧಿಸುವುದಕ್ಕಾಗಿ? ತಿಂಗಳಿಗೆ ಇಪ್ಪತ್ತು ರೂಪಾಯಿ ತೆತ್ತು, ಮೈಸೂರಿನ ಪ್ರಸಿದ್ಧ ವೀಣಾ ವಿದ್ವಾಂಸರೊಬ್ಬರಿಂದ ಹತ್ತು ವರ್ಷಗಳ ಕಾಲ ಸತತವಾಗಿ ಹೇಳಿಸಿಕೊಂಡ ವೀಣಾವಾದನ–ಈಗೆಲ್ಲಿ?

ಸಾತಮ್ಮನಿಗೇನೋ ಸೊಸೆಯ ಬಗ್ಗೆ ಅಪಾರ ಹೆಮ್ಮೆ–ಆಕೆ ವಿದ್ಯಾವತಿಯೆಂದು, ಸಂಗೀತಗಾರ್ತಿಯೆಂದು.

ಎಲ್ಲಾದರೂ ಅರಶಿನ ಕುಂಕುಮಕ್ಕೆ ಹೋದಾಗ ಅಲ್ಲಿ ಮನೆಯವರು

'ನಿಮ್ಮ ಸೊಸೆಗೆ ಸಂಗೀತ ಬರುತ್ತದೆಯೇ?' ಎಂದು ಕೇಳಿದಾಗ ಸಾತಮ್ಮ ಹೆಮ್ಮೆಯಿಂದ

'ಸೊಗಸಾಗಿ ವೀಣೆ ಬಾರಿಸುತ್ತಾಳೆ. ದನಿಯೂ ಚೆನ್ನಾಗಿದೆ' ಎನ್ನುತ್ತಿದ್ದರು.

ಮನೆಯವರು ಹಾಡೆಂದು ಕಲ್ಯಾಣಿಯನ್ನು ಬಲವಂತಪಡಿಸಿದರೆ ಅವಳು 'ಗಂಟಲು ಕಟ್ಟಿದೆ' ಎಂದೋ, ನೆಗಡಿಯೆಂದೋ ನೆಪ ಹೇಳಿ ತಪ್ಪಿಸಿಕೊಳ್ಳುತ್ತಿದ್ದಳು.

'ಹೋಗಲಿ ಬಾಯಿಹಾಡು ಬೇಡ. ವೀಣೆ ನುಡಿಸು' ಎಂದಾಗ ಕಲ್ಯಾಣಿ

'ನನ್ನ ತಂತಿಯ ಉಗುರು ತಂದಿಲ್ಲ, ಅದಿಲ್ಲದಿದ್ದರೆ ನನಗೆ ಬಾರಿಸೋಕೆ ಆಗೊಲ್ಲ' ಎಂದುಬಿಡುತ್ತಿದ್ದಳು.

ಆಗ ಸಾತಮ್ಮನಿಗೆ ಬಹಳ ಬೇಸರವಾಗುತ್ತಿತ್ತು.

'ಹೋಗಲಿ. ನೀವೇ ಹೇಳಿ ಸಾತಮ್ಮ. ಮಗೂಗೆ ಆಶೀರ್ವಾದ

ಮಾಡಿದ ಹಾಡು, ಆರತಿ ಹಾಡು ಹೇಳಿ' ಎನ್ನುತ್ತಿದ್ದರು ಮನೆಯವರು.

ಆಗ ಸಾತಮ್ಮ ಹಸೆಗೆ ಕರೆದ ಹಾಡನ್ನು ತಮ್ಮ ಏರುತಗ್ಗಿನ ಒಡಕು ದನಿಯಲ್ಲಿ ಯಾವುದೊಂದು ರಾಗವನ್ನೂ ಅನುಸರಿಸದೆ ಸರಾಗವಾಗಿ ಹಾಡುತ್ತಿದ್ದರು.

ಆಕೆ ಹಾಡುವುದನ್ನು ಕೇಳಿದಾಗ ಸಂಗೀತ ಕಲಿತಿದ್ದ ಕಲ್ಯಾಣಿಗೆ ತುಂಬಾ ನಗು ಬರುತ್ತಿತ್ತು.

ಆದರೆ ತಾನು ಸಂಗೀತ ಕಲಿತಿದ್ದು ಯಾರಿಗಾಗಿ, ಯಾತಕ್ಕೋಸ್ಕರ ಎಂಬುದನ್ನು ಆಕೆ ಯೋಚಿಸುತ್ತಿರಲಿಲ್ಲ.

ಸಂಗೀತ ಕಲಿತವಳು ತಾನು—ಹೇಳೆಂದು ಇತರರು ಕೇಳಿದಾಗ ಹಾಡದಿರುವುದು ಸೊಗಸು, ಚೆನ್ನು ಎಂದು ಆಕೆಯ ಭಾವನೆ.

ದೇವರು ಆಕೆಗೆ ಇಂಪಾದ ಕಂಠವಿತಿದ್ದ. ಆಕೆಯ ಬೆರಳುಗಳು ವೀಣೆಯೊಡನೆ, ಮಕ್ಕಳು ಆಟದ ಸಾಮಾನುಗಳೊಡನೆ ಆಡುವಂತೆ ಆಡುತ್ತಿದ್ದವು. ಆ ಕೌಶಲ್ಯ ಆಕೆಗೆ ಸಾಧಿಸಿತ್ತು. ಹಾಲು ಸಕ್ಕರೆ ಬೆರತಂತೆ ಆಕೆಯ ಕಂಠ ವೀಣೆಯ ಇನಿದನಿಯೊಡನೆ ಒಂದಾಗುತ್ತಿತ್ತು.

ಆದರೆ ಅವೆಲ್ಲವೂ ವ್ಯರ್ಥ.

ಈ ಬಗೆಯ ಧೋರಣೆ ತಳೆಯುವುದಾದರೆ ಸಂಗೀತ ಕಲಿಯುವುದಾದರೂ ಯಾಕೆ?

ಕೆಲವು ವಿಷಯಗಳಲ್ಲಿ ತಾವು ಬಾಯಿ ಹಾಕುವುದು ತಮ್ಮ ಗೌರವಕ್ಕೆ ಕುಂದು ಎಂದು ಸಾತಮ್ಮ ಭಾವಿಸಿದ್ದರು. ತನ್ನ ಅತ್ತೆಯ ಸ್ಥಾನಕ್ಕೆ ಗೌರವ ಕೊಟ್ಟಿದ್ದಾಳೆ ಸೊಸೆ. ಅವಳಿಗೆ ಇಷ್ಟವಿಲ್ಲದ ವಿಷಯಗಳಲ್ಲಿ ತಾವು ಪ್ರವೇಶಿಸಿ ಆ ಗೌರವವನ್ನು ಯಾಕೆ ಕಳೆದುಕೊಳ್ಳಬೇಕು?

ತನ್ನ ಕರ್ತವ್ಯವೆಂದು ಕಲ್ಯಾಣಿ ಸಾಧಾರಣವಾ ಏನು ಕೆಲಸ ಮಾಡಬೇಕಾದರೂ ಅತ್ತೆಯನ್ನು ಕೇಳುತ್ತಿದ್ದಳು. ತಾವು ಹೂಗುಟ್ಟುವುದು ತಮ್ಮ ಕರ್ತವ್ಯವೆಂದು ಸಾತಮ್ಮ ಭಾವಿಸಿದ್ದರು. ತಾವು ಅವಳ ಆ ಕಾರ್ಯಕ್ಕೆ ಒಪ್ಪಿಗೆ ಕೊಡದಿದ್ದರೂ ಕಲ್ಯಾಣಿ ಆ ಕೆಲಸವನ್ನು ಮಾಡಿಯೇ ತೀರುವಳೆಂಬುದು ಸಾತಮ್ಮನಿಗೆ ಗೊತ್ತು. ತಮ್ಮ ಸ್ಥಾನವನ್ನೇಕೆ ವೃಥಾ ಕೆಳಗಿಳಿಸಬೇಕು?

ಮದುವೆಯಾದ ಮೊದಲ ಒಂದು ವರ್ಷ ಸ್ವರ್ಗವೇ ಅವರ ಪಾಲಿಗೆ ಭೂಮಿಗೆ ಇಳಿದಿತ್ತು. ಎರಡನೆಯ ವರ್ಷ ತುಂಬಾ ಶುಷ್ಕವಾಗಿ, ನೀರಸ ವಾಗಿ ಕಳೆಯಿತು.

ಕಲ್ಯಾಣಿ, ರಾಮನಾಥರಿಗೆ ಎಷ್ಟು ಬೇಸರವಾಗಿತ್ತೆಂದರೆ 'ಇನ್ನೂ ಹೀಗೆಯೆ ಎಷ್ಟೊಂದು ವರ್ಷಗಳನ್ನು ಕಳೆಯಬೇಕು?' ಎನ್ನಿಸಿಬಿಟ್ಟಿತ್ತು.

ಗಡಿಯಾರದಂತೆ ಅವರ ಬಾಳು ಸಾಗಿತ್ತು.

ಬೆಳಿಗ್ಗೆ ಆರುಗಂಟೆಗೆ ಎಚ್ಚರ–ಕ್ಷೌರ ಮಾಡಿಕೊಳ್ಳುವುದು–ತಿಂಡಿ, ಕಾಫಿ ಮುಗಿಸಿ ಬಸ್ಸಿಗೆ ಹೊರಡುವುದು-ಸಂಜೆ ಐದುಗಂಟೆಗೆ ವಾಪಸ್ ಬರುವುದು–ತಿಂಡಿ, ಕಾಫಿ–ಕ್ಲಬ್ಬು. ರಾತ್ರಿ ಒಂಭತ್ತು ಗಂಟೆಗೆ ಮನೆಗೆ ಮರಳುವುದು–ಊಟ–ಒಂದು ಗಂಟೆ ಪತ್ರಿಕೆಗಳನ್ನೋದುವುದು—ನಿದ್ದೆ.

ಸೂರ್ಯ ಹುಟ್ಟುವುದು ತಪ್ಪಿದರೂ ರಾಮನಾಥನ ಈ ದಿನಚರಿ ಒಂದು ಗಳಿಗೆ ಸಹಿತ ವ್ಯತ್ಯಾಸವಾಗುವಂತಿರಲಿಲ್ಲ.

ಕಲ್ಯಾಣಿ ಏಳುಗಂಟೆಗೆ ಏಳುತ್ತಿದ್ದಳು.—ಅತ್ತೆಗೆ ಕೊಂಚ ಸಹಾಯ ಮಾಡುವುದು-ಸ್ನಾನ, ಗಂಡನಿಗೆ ಊಟ ಕಳುಹಿಸುವುದು-ತನ್ನೂಟ ಮುಗಿಸು ವುದು-ನಿದ್ದೆ. ನಾಲ್ಕು ಗಂಟೆಗೆ ಎಚ್ಚರ-ತಿಂಡಿ-ಗಂಡ ಕ್ಲಬ್ಬಿಗೆ ಹೋದ ನಂತರ ಶಾರದೆಯೊಡನೆ ಸಮಾಜಕ್ಕೆ ಹೋಗಿ ಮರಳುವುದು-ಊಟ-ನಿದ್ದೆ.

ಒಂದು ದಿನದಲ್ಲಿ ಗಂಡ, ಹೆಂಡಿರ ನಡುವೆ ನಾಲ್ಕಾರು ಮಾತುಗಳು ಸಹ ನಡೆಯುತ್ತಿರಲಿಲ್ಲ.

ಆಡುವಂತಹ ವಿಷಯವಾದರೂ ಏನಿದ್ದೀತು! ಆಡಿದ ಮಾತನ್ನೇ ಆಡುವುದರಲ್ಲಿ ಏನು ಸ್ವಾರಸ್ಯ? ಹೀಗಾಗಿ ಗಂಡ, ಹೆಂಡತಿ ಮಾತನಾಡು ವುದನ್ನೇ ಕಡಿಮೆ ಮಾಡಿದ್ದರು.

ರಾತ್ರಿಯಾಗಲಿ, ಆಗದಿರಲಿ, ಅವರ ದಿನಚರಿ ಯಾಂತ್ರಿಕವಾಗಿ ಸಾಗಿತ್ತು.

ಇನ್ನು ದಾಂಪತ್ಯ ಜೀವನ. ಅದರಲ್ಲಿಯೂ ಮೊದಲಿನ ಉನ್ಮಾದ ವಾಗಲಿ, ಕಾವಾಗಲಿ, ಉತ್ಸಾಹವಾಗಲಿ ಇರಲಿಲ್ಲ.

ಪ್ರಾಣಧಾರಣೆಗಾಗಿ ಊಟ ಮಾಡಿಯೇ ತೀರಬೇಕು. ರುಚಿ ರುಚಿ ಯಾದ ಅಡಿಗೆಯೇ ಆಗಬೇಕೆಂಬ ನಿಯಮವೇನೂ ಇರಲಿಲ್ಲ. ಹೊಟ್ಟೆ

ತುಂಬಿಸಿಕೊಳ್ಳುವುದಕ್ಕಾಗಿ ಎಂತಹದೋ ಒಂದು ಊಟ. ಅಂತೆಯೇ ದಾಂಪತ್ಯ ಜೀವನದ ಪಾಡೂ ಆಗಿತ್ತು.

ದಿನ ಬೆಳಗಾಗೆದ್ದು ಕ್ಷೌರ ಮಾಡಿಕೊಳ್ಳಲೇ ಬೇಕಿತ್ತು. ಹಾಗೆಯೇ ಅದೂ.

ಆದರೆ ಅವರಲ್ಲಿರುವ ಉತ್ಸಾಹ, ಉಲ್ಲಾಸವಾದರೂ ಎಂತಹುದು?

ಒಂದು ವಿಷಯದಲ್ಲಿ ಮಾತ್ರ ದಂಪತಿಗಳು ಎಚ್ಚರಿಕೆಯಿಂದಿದ್ದರು. ಒಬ್ಬರಿಗೊಬ್ಬರು ಯಾವ ರೀತಿಯಿಂದಲೂ ನೋವನ್ನುಂಟುಮಾಡಲು ಅಳುಕುತ್ತಿದ್ದರು. ಅವನ ಪಾಡು ಅವನಿಗೆ. ಅವಳ ಪಾಡು ಅವಳಿಗೆ.

ಚುಚ್ಚಿ ನೋಯಿಸುವ ಹಾಗೆ ಯಾರೂ ಮಾತನಾಡುತ್ತಿರಲಿಲ್ಲ.

ರಾಮನಾಥನಿಗೇನೋ ಕ್ಲಬ್ಬಿನಲ್ಲಿ ಬೇಕಾದ ಹಾಗೆ ಗೆಳೆಯರಿದ್ದರು. ಆದುದರಿಂದ ಅವನಿಗೆ ಸ್ನೇಹದ ಕೊರತೆಯಿರಲಿಲ್ಲ. ಆದರೆ ಕಲ್ಯಾಣಿಗೆ ಯಾರೂ ಗೆಳತಿಯರಿರಲಿಲ್ಲ. ಅವಳಿಗಿದ್ದ ಗೆಳತಿಯೊಬ್ಬಳು ಶಾರದೆ. ಅವಳೋ ಶುದ್ಧ "ಬೋರಮ್ಮ"!

ಕಲ್ಯಾಣಿ ಶಾರದೆಗಿತ್ತಿದ್ದ ಅಡ್ಡ ಹೆಸರು 'ಬೋರಮ್ಮ'. 'ಬೋರ್' ಮಾಡುವವಳೆಂದು ಅವಳಿಗೆ ಆ ಹೆಸರನ್ನಿಟ್ಟಿದ್ದಳು ಕಲ್ಯಾಣಿ. ಅವಳನ್ನು ಬಿಟ್ಟರೆ ಕಲ್ಯಾಣಿಗೆ ಬೇರೆ ಯಾರೂ ಗತಿಯೇ ಇರಲಿಲ್ಲ.

ಶಾರದ ಮನೆಗೆ ಬಂದು ಕಲ್ಯಾಣಿಗೆ ಮತ್ತಷ್ಟು ಬೇಸರವನ್ನುಂಟು ಮಾಡಿ ಹೋಗುತ್ತಿದ್ದಳು. ಅವಳ ಮಾತುಗಳೋ ಆ ರಾಮನಿಗೇ ಪ್ರೀತಿಯಾಗಬೇಕು.

ಒಂದು ಸಲ ಕಲ್ಯಾಣಿ ಶಾರದೆಯ ಹಣೆಯಮೇಲೆ ಒಂದು ಸಣ್ಣ ಕಲೆಯಿರುವುದನ್ನು ಗಮನಿಸಿ ಕೆಟ್ಟಗಳಿಗೆಯಲ್ಲಿ 'ಅದೇನದು ಕಲೆ?' ಎಂದು ಕೇಳಿಬಿಟ್ಟಳು.

ಕಲ್ಯಾಣಿ ಹಾಗೆ ಕೇಳಿದ್ದೇ ತಡ—ಶಾರದ ತಾನು ಜನ್ಮ ತಾಳಿದ್ದು—ಹಲವಾರು ಹರಕೆಗಳನ್ನು ಹೊತ್ತು ಗಿರಿ ಹತ್ತಿ ವರಬೇಡಿ ತನ್ನನ್ನು ತಾಯಿ—ತಂದೆ ಪಡೆದುದು-ಅವಳ ಬಾಲ್ಯ-ಬಾಲ ಲೀಲೆಗಳು-ವಿದ್ಯಾಭ್ಯಾಸ-ಯೌವನ-ಮದುವೆ—ನಾಲ್ಕು ವರ್ಷ ಸಂಸಾರ—ನಂತರ ಗಂಡ ತನ್ನನ್ನು ಬಿಟ್ಟು ದೇಶಾಂತರ ಓಡಿ ಹೋದದ್ದು....ಇತ್ಯಾದಿ ಸಂಗತಿಗಳನ್ನು ಸವಿಸ್ತಾರವಾಗಿ

ಸುಮಾರು ನಾಲ್ಕು ಗಂಟೆಗಳ ಕಾಲ ಒಂದೇ ಸಮನೆ ಬಿಡುವಿಲ್ಲದೆ ವಿವರಿಸಿದಳು.

ಕಲ್ಯಾಣಿಗೆ, 'ಇವಳನ್ನು ಯಾಕೆ ಕೇಳಿದೆ' ಎಂದು ಹಣೆ ಹಣೆ ಚಚ್ಚಿಕೊಳ್ಳುವಂತಾಯಿತು.

ಅವಳು ಆಕಳಿಸಿದಳು–ತೂಕಡಿಸಿದಳು–ಪುಸ್ತಕ ಕೈಲಿ ಹಿಡಿದು ಓದುವವಳಂತೆ ನಟಿಸಿದಳು–ಕಸೂತಿ ಹಾಕಿದಳು ...ಊಹೂಂ...ಶಾರದೆಯದು ಎಮ್ಮೆಯ ಚರ್ಮ. ಹಾಗೆಲ್ಲಾ ಸುಳುವು, ಸೂಕ್ಷ್ಮವನ್ನು ತಿಳಿದುಕೊಳ್ಳುವವಳೇ ಅಲ್ಲ.

ಆ ಹಣೆಯ ಮೇಲಿದ್ದ ಕಲೆಯ ಇತಿಹಾಸ–ಸುಮಾರು ಐನೂರು ಪುಟಗಳಾಗುವಷ್ಟು ವರ್ಣಿಸಿದಳು.

ಶಾರದೆಯ ಗಂಡ ಯಾವಾಗಲೋ ಕೋಪಗೊಂಡು ಕತ್ತರಿಯಿಂದ ಅವಳ ಹಣೆಗೆ ಹೊಡೆದಿದ್ದನಂತೆ. ಅದರದೇ ಕಲೆ.

ಅಯ್ಯೋ ಆ ಪಾಪಿ-ಆ ಕತ್ತರಿಯಿಂದ ಹಣೆಗೆ ಹೊಡೆಯುವ ಬದಲು ಇವಳ ನಾಲಿಗೆ ಕತ್ತರಿಸಿದ್ದರೆ ಚೆನ್ನಾಗಿತ್ತು ಎಂದು ಕಲ್ಯಾಣಿ ಸಂಕಟಪಟ್ಟಳು.

ಶಾರದೆಯ ಗಂಡ ಹೆಂಡತಿಯನ್ನು ಬಿಟ್ಟು ತಲೆ ಮರೆಸಿಕೊಂಡು ದೇಶಾಂತರ ಯಾಕೆ ಓಡಿ ಹೋದ ಎಂದು ಕಲ್ಯಾಣಿಗೆ ಈಗ ಅರ್ಥವಾಯಿತು.

ಪಾಪ! ಆ ಬಡಪಾಯಿ ಇವಳೊಡನೆ ನಾಲ್ಕು ವರ್ಷ ಸಂಸಾರ ಮಾಡಿದ್ದೇ ಹೆಚ್ಚು. ಅವನ ಸಹನೆ, ಶಾಂತಿ, ತಾಳ್ಮೆಗೆ ಬಹುಮಾನ ಕೊಡಬೇಕು. ತಾನೇನಾದರೂ ಶಾರದೆಯ ಗಂಡನಾಗಿದ್ದರೆ ಅವಳೆಡೆ ಎರಡು ದಿನವೂ ಇರುತ್ತಿರಲಿಲ್ಲ.

ಶಾರದೆಯ ಸ್ನೇಹ ಮಾಡಿದ ಮೇಲೆ ಇತರರ ಸ್ನೇಹ ಮಾಡಲು ಕಲ್ಯಾಣಿ ಹೆದರುತ್ತಿದ್ದಳು.

ಯಾವ ಹುತ್ತದಲ್ಲಿ ಎಂತಹ ನಾಲಿಗೆಯಿದೆಯೋ ?

ಶಾರದೆಯನ್ನು ಕೊಡವಿಕೊಳ್ಳುವುದು ಕಲ್ಯಾಣಿಗೆ ಸಾಧ್ಯವಿರಲಿಲ್ಲ. ಹೀಗಾಗಿ ಕಲ್ಯಾಣಿಗೆ ಸ್ನೇಹದ, ಸಖ್ಯದ ಅಭಾವವಿತ್ತು.

ಒಂದುದಿನ ಕಲ್ಯಾಣಿ ಕನ್ನಡ ದಿನಪತ್ರಿಕೆಯೊಂದನ್ನು ಓದುತ್ತ

ಕುಳಿತಿದ್ದಳು.

ಪತ್ರಿಕೆಯ 'ಬೇಕಾಗಿದೆ' ಎಂಬ ಜಾಹೀರಾತೊಂದು ಕಲ್ಯಾಣಿಯ ಗಮನವನ್ನು ಸೆಳೆಯಿತು. ಓದಬೇಕಾದುದನ್ನೆಲ್ಲಾ ಓದಿ ಮುಗಿಸಿದ್ದುದರಿಂದ ಕಲ್ಯಾಣಿ ಆ ವಾಕ್ಯಗಳ ಮೇಲೆ ಆಲಸ್ಯದಿಂದ ಕಣ್ಣೋಡಿಸಿದಳು.

"ಬೆಂಗಳೂರಿನಲ್ಲಿರುವ ಖಾಸಗಿ ಹೈಸ್ಕೂಲೊಂದಕ್ಕೆ ಕೆಮಿಸ್ಟ್ರಿ, ಬಯಾಲಜಿ ಮುಂತಾದವುಗಳನ್ನು ಹೇಳಿಕೊಡಲು ಉಪಾಧ್ಯಾಯಿನಿಯೊಬ್ಬರು ಬೇಕಾಗಿದ್ದಾರೆ. ಈ ಕೆಳಗೆ ಕಂಡ ವಿಳಾಸದಲ್ಲಿ ವಿಚಾರಿಸಿ........"

ಕಲ್ಯಾಣಿ ಪತ್ರಿಕೆಯನ್ನು ಮಡಿಸಿಟ್ಟಳು. ಯೋಚನೆಯೊಂದು ಅವಳ ಮನಸ್ಸಿನಲ್ಲಿ ಸುಳಿಯಿತು.

ತಾನೇಕೆ ಕೆಲಸ ಮಾಡಬಾರದು?

ಹೇಗಿದ್ದರೂ ಅತ್ತೆ ಮನೆಗೆಲಸಗಳನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ತಾನು ಅವರಿಗೆ ಮಾಡುತ್ತಿರುವ ಸಹಾಯವಾದರೂ ಅಷ್ಟರಲ್ಲಿಯೇ ಇದೆ.

ರಾಮನಾಥ ತಾನು ಏನು ಕೆಲಸ ಮಾಡಿದರೂ ಅಡ್ಡಿಪಡಿಸುತ್ತಿರಲಿಲ್ಲ. ತನಗೆ ಕೆಲಸ ಮಾಡುವ ಅಪೇಕ್ಷೆ ಇದೆ ಎಂದು ತಿಳಿಸಿದರೆ ಅವನು ಖಂಡಿತ ತನ್ನ ಆಸೆಗೆ ಅಡ್ಡವಾಗಲಾರ. ಹೆಂಗಸರು ಗಂಡಸರಂತೆ ಹೊರಗೆ ದುಡಿದು ಸಂಪಾದಿಸುವುದನ್ನು ಅವನೂ ಒಪ್ಪಿಕೊಳ್ಳುತ್ತಿದ್ದ. ಹೆಣ್ಣು ದುಡಿಯುವುದು ಅವನಿಗೆ ಯಾವತ್ತಿಗೂ ತಪ್ಪಾಗಿ ಕಾಣುತ್ತಿರಲಿಲ್ಲ.

ಶೇಷಯ್ಯನವರನ್ನು ಒಪ್ಪಿಸುವುದು ಕಷ್ಟವಾಗಲಾರದು. ಹಣವೆಂದರೆ ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಣುತ್ತಿದ್ದ ಆತ ಸೊಸೆಯೂ ದುಡಿದು ಹಣ ತರುವಳೆಂದರೆ ಖಂಡಿತ ಒಪ್ಪಿಯೇ ಒಪ್ಪುತ್ತಾರೆ.

ಆದರೆ ಸಾತಮ್ಮ ಒಪ್ಪುವರೋ ಇಲ್ಲವೋ ಎಂಬ ಅನುಮಾನ ಮಾತ್ರ ಅವಳಲ್ಲಿ ಬಲವಾಗಿತ್ತು.

ಇಷ್ಟಕ್ಕೂ ತಾನು ಅರ್ಜಿಯನ್ನು ಕಳುಹಿಸಿದ ಮಾತ್ರಕ್ಕೆ ಕೆಲಸ ಸಿಕ್ಕಿದ ಹಾಗಾಯಿತೇ? ಮೊದಲು ಅರ್ಜಿಯನ್ನು ಕಳುಹಿಸಿದರಾಯಿತು. ಕೆಲಸಕ್ಕೆ ಕರೆ ಬಂದ ಮೇಲೆ ನೋಡಿಕೊಳ್ಳೋಣ.

ಕಲ್ಯಾಣಿಯ ಯೋಚನೆಯ ಹೊಳೆ ಹಾಗೆ ಹರಿಯಿತು.

ಕೂಡಲೇ ಅವಳು ತನ್ನ ಅರ್ಹತೆಗಳನ್ನು ಕುರಿತು ಆ ವಿಳಾಸಕ್ಕೆ ಒಂದು ಅರ್ಜಿಯನ್ನು ಕಳುಹಿಸಿದಳು. ಅರ್ಜಿಯನ್ನು ಕಳುಹಿಸಿದ ಕೂಡಲೇ ಅವಳು ಅದರ ವಿಷಯವನ್ನೇ ಮರೆತು ಬಿಟ್ಟಳು.

ಮನೆಯಲ್ಲಿ ಮಾಡಲು ಕೆಲಸವಿಲ್ಲದೆ ತಮಾಷೆಗೆ ಮಾಡಿದ ಕೆಲಸವದು. ಕೊನೆಗೆ ತನ್ನ ಗಂಡನ ಕಿವಿಯಲ್ಲಿ ಒಂದು ಮಾತನ್ನು ಹಾಕಬೇಕೆಂಬುದನ್ನು ಸಹಿತ ಕಲ್ಯಾಣಿ ಮರೆತುಬಿಟ್ಟಳು.

ಹತ್ತು ದಿನಗಳ ನಂತರ ಕಲ್ಯಾಣಿಯ ಹೆಸರಿಗೊಂದು ಟಪಾಲು ಬಂತು. ಕವರಿನ ಮೇಲಿದ್ದ ಅಪರಿಚಿತವಾದ ಬರವಣಿಗೆಯನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ಅವಳು ಕವರನ್ನು ತಿರುಗಿಸಿ ನೋಡಿ ಕೊನೆಗೆ ಒಡೆದಳು.

ಕಾಗದವನ್ನು ಒಡೆದ ಕೂಡಲೆ ಅವಳ ಸಮಸ್ಯೆ ಪರಿಹಾರವಾಯಿತು.

ಸ್ಕೂಲಿನ ಕಮಿಟಿಯವರು ಅವಳನ್ನು ಭೇಟಿಗೆ ಕರೆದಿದ್ದರು.

ಕಲ್ಯಾಣಿಗೆ ತನ್ನ ಕಣ್ಣುಗಳನ್ನು ನಂಬುವುದೇ ಕಷ್ಟವಾಯಿತು. ಒಂದು ಗಳಿಗೆ ಅವಳಿಗೆ ಏನು ಮಾಡಲೂ ತೋರಲಿಲ್ಲ. ಕೂಡಲೆ ಅವಳು ಸಾವರಿಸಿಕೊಂಡು ಕಳ್ಳಗಣ್ಣುಗಳಿಂದ ಸುತ್ತಲೂ ನೋಡಿ ಕವರನ್ನು ತನ್ನ ಮಡಿಲಿನೊಳಗಿಟ್ಟುಕೊಂಡು ರೂಮಿಗೆ ಹೋದಳು. ರೂಮಿನ ಬಾಗಿಲನ್ನು ಹಾಕಿಕೊಂಡು ಅವಳು ಮತ್ತೊಮ್ಮೆ ಕಾಗದವನ್ನು ಓದಿದಳು.

ನಿಜ. ಕರೆ ಅವಳಿಗೇ ಬಂದಿತ್ತು.

ತಾನೇಕೆ ಹೋಗಿ ಅದೃಷ್ಟ ಪರೀಕ್ಷೆ ನಡೆಸಬಾರದು. ಮನೆಯಲ್ಲಿ ಸುಮ್ಮನೆ ಕುಳಿತು ಕಾಲ ಕಳೆಯುವುದಕ್ಕಿಂತ ತಾನು ಕಲಿತಿರುವ ವಿದ್ಯೆಯನ್ನೇಕೆ ಸಾರ್ಥಪಡಿಸಿಕೊಳ್ಳಬಾರದು? ಅಷ್ಟು ವರ್ಷಗಳ ಕಾಲ ಕಷ್ಟಪಟ್ಟು ಓದಿದ್ದಕ್ಕೆ ನಾಲ್ಕು ಕಾಸನ್ನಾದರೂ ಸಂಪಾದಿಸಿದರಾದೀತು.

ಕೊನೆಗೆ ಒಂದು ಸ್ನೋ, ಪೌಡರಿಗೂ ತಾನು ಗಂಡನನ್ನು ಹಣ ಕೇಳಬೇಕು. ತಾನೇ ಸಂಪಾದಿಸಿದರೆ? ತನ್ನ ಹಣವನ್ನೆಲ್ಲಾ ತನಗಿಷ್ಟ ಬಂದ ಹಾಗೆ ಖರ್ಚು ಮಾಡಬಹುದು.

ಕಲ್ಯಾಣಿಗೆ ಆ ದಿನ ಹೇಗೆ ಕಳೆಯಿತೆಂಬುದೇ ತಿಳಿಯಲಿಲ್ಲ. ರಾತ್ರಿಯ ಊಟ ಮುಗಿಸಿ ರಾಮನಾಥ ವೃತ್ತ ಪತ್ರಿಕೆಯನ್ನು ಕೈಗೆ ತೆಗೆದುಕೊಳ್ಳು

ತ್ತಲೇ ಕಲ್ಯಾಣಿ ಶಾಲೆಯಿಂದ ತನ್ನ ಹೆಸರಿಗೆ ಬಂದಿದ್ದ ಪತ್ರವನ್ನು ಗಂಡನ ಕೈಗಿತ್ತಳು.

"ಏನೇ ಇದು ?"

"ಓದಿ ನೋಡಿ ..." ಎನ್ನುತ್ತಾ ಕಲ್ಯಾಣಿ ರಾಮನಾಥನನ್ನು ಒತ್ತರಿಸಿ ಅದೇ ಕುರ್ಚಿಯಲ್ಲಿ ತಾನೂ ಸ್ವಲ್ಪ ಸ್ಥಳ ಮಾಡಿಕೊಂಡಳು.

"ಮುನ್ನೂರು ಪೌಂಡು ಭಾರಾನ ಈ ಕುರ್ಚಿ ತಡೆಯಲಾರದು" ಎಂದು ರಾಮನಾಥ ಕಲ್ಯಾಣಿಯನ್ನು ರೇಗಿಸಿದ.

ಕಲ್ಯಾಣಿ ಸ್ವಲ್ಪ ದುಂಡಗಿದ್ದಳು. ಕೆನ್ನೆ, ಕೈ, ಕಾಲುಗಳು ಮಕ್ಕಳಂತೆ ಗುಂಡಗಿದ್ದುದರಿಂದ ರಾಮನಾಥ ಅವಳನ್ನು ಆಗಾಗ್ಗೆ ರೇಗಿಸುತ್ತಿದ್ದ. ಅವಳ ದುಂಡುಗೆನ್ನೆಯನ್ನು ಆಗಾಗ್ಗೆ ಹಿಂಡುವುದೆಂದರೆ ಅವನಿಗೆ ಅತಿ ಪ್ರೀತಿ.

"ಕಾಗದ ನೋಡಿ ಮೊದಲು. ಆಮೇಲೆ ನನ್ನ ಪೌಂಡೆಷ್ಟೂಂತ ಹೇಳ್ಳೋರಂತೆ."

ರಾಮನಾಥ ಕಾಗದವನ್ನು ಓದಿ ಅಚ್ಚರಿಯಿಂದ ಹೆಂಡತಿಯ ಕಡೆ ತಿರುಗಿದ.

"ಯಾವಾಗ ಬಂತು ?"

"ಬೆಳಿಗ್ಗೆ"

"ನೀನು ಅರ್ಜಿ ಕಳಿಸಿದ್ದೆಯಾ ?"

"ಹೂಂ. ಅರ್ಜಿ ಕಳಿಸಿ ಏಳೆಂಟು ದಿನಗಳಾಗಿರಬಹುದು. ನಂಗೂ ಮನೇಲಿ ತುಂಬಾ ಬೇಜಾರು. ಸಮಯ ಹೋಗುವುದೇ ಇಲ್ಲ"

"ಶಾರದ ಇದಾಳಲ್ಲಾ ...."

"ಸುಮ್ಮನಿರಿ ದಮ್ಮಯ್ಯ. ಅವಳ ಮಾತು ಕೇಳ್ತಾ ಇದ್ದರೆ ನನ್ನ ಲಾಲ್‌ಬಾಗಿನ ಹಿಂದಿರುವ ಕಟ್ಟಡಕ್ಕೆ ಕಳಿಸಬೇಕಾಗತ್ತೆ."

"ನೀನೂ ಅವಳೂ ತುಂಬಾ ಸ್ನೇಹಿತರು"

"ಅವಳೇ ಬಂದು ಕೂತ್ಕೊಂಡರೆ ನಾನೇನು ಮಾಡಲಿ ಹೇಳಿ?"

"ಏನೋ ಪಾಪ, ಹುಡುಗಿ ಒಬ್ಬಳೇ ಇದಾಳೇಂತ ನೀನು...."

"ಅವಳ ಕಾಟದಿಂದ ತಪ್ಪಿಸಿಕೊಳ್ಳೋಣಾಂತಾನೆ ನಾನೀಗ ಸ್ಕೂಲಿಗೆ ಮೇಡಮ್ಮಾಗಿ ಸೇರೋಣಾಂತಿದೀನಿ."

"ನೀನೇ ಎಲ್ಲಾ ನಿರ್ಧರ ಮಾಡಿರುವ ಹಾಗಿದೆ."

"ನಿಮ್ಮ ರುಜೂಗೆ ಕಾಯ್ತಿದೀನಿ."

ರಾಮನಾಥ ಪತ್ರಿಕೆಯನ್ನು ಮಡಿಸಿಟ್ಟು ನಿಧಾನವಾಗಿ ಹೇಳಿದ:

'ಕಲ್ಯಾಣಿ, ನಾನೊಂದು ಮಾತು ಹೇಳ್ತೀನಿ. ಕೋಪಿಕೊಳ್ಳಬೇಡ.'

"ಏನದು ಹೇಳಿ ?"

"ನಾನು ನಿನಗೇನು ಕಡಿಮೆ ಮಾಡಿದೀನಿ ಹೇಳು ? ನೀನು ಸಂಪಾದನೆ ಮಾಡಿ ಏನಾಗಬೇಕಾಗಿದೆ ?"

ಕಲ್ಯಾಣಿಗೆ ಆಶ್ಚರ್ಯವಾಯಿತು.

ರಾಮನಾಥ ವಿದ್ಯಾವಂತ. ಹೆಂಡತಿಗೆ ಸರ್ವ ಸ್ವಾತಂತ್ರ್ಯವನ್ನು ಕೊಟ್ಟಿದ್ದ. ಅವಳೆಲ್ಲಿಗಾದರೂ ಹೋಗಲಿ, ಬರಲಿ, ಯಾಕೆ ಎಲ್ಲಿಗೆ ಎಂದು ಎಂದೂ ಕೇಳಿದವನಲ್ಲ. ಹೆಂಡತಿಯ ಮನಸ್ಸಿಗೆ ಬೇಸರವಾಗದಿದ್ದರೆ ಸರಿ. ಅವಳ ಸಂತೋಷ ಅವನಿಗೆ ಮುಖ್ಯವಾಗಿತ್ತು. ಆದುದರಿಂದ ಅವನು ಯಾವಾಗಲೂ ಅವಳನ್ನು ತನ್ನ ಪ್ರಶ್ನೆಗಳಿಂದ ಪೀಡಿಸಿದವನಲ್ಲ. ಅಂತಹವನು ಈಗ ಅಡ್ಡಿ ಮಾಡಬೇಕಾದರೆ ?

"ನೀವು ಒಪ್ಪಿಕೊಳ್ತೀರೀಂತ ನಾನು ತಿಳ್ಕೊಂಡಿದ್ದೆ."

"ಈಗಲೂ ನನ್ನ ಒಪ್ಪಿಗೆ ಇದೆ. ಆದರೆ ನೀನು ಕೆಲಸಕ್ಕೆ ಸೇರಬೇಕಾದಂತಹ ಸಂದರ್ಭವಾದರೂ ಏನಿದೆ? ಗಂಡ ದುಡಿದು ತರುವುದು ಸಾಲದಿದ್ದರೆ ಹೆಂಡತಿ ದುಡಿಯಬೇಕಾದುದು ನ್ಯಾಯ. ಆ ವಿಷಯದಲ್ಲಿ ನಾನು ಭಾಗ್ಯಶಾಲಿ. ದೇವರು ಕೈತುಂಬ ಸಂಬಳ ಬರುವ ಕೆಲಸ ಕೊಟ್ಟಿದ್ದಾನೆ. ನೀನು ಉಂಡು, ತಿಂದು, ನಾನು ಸಂಪಾದಿಸಿದುದನ್ನು ಖರ್ಚು ಮಾಡಿಕೊಂಡು ಹಾಯಾಗಿರಬಾರದೇಕೆ ?"

"ಹಾಗಾದರೆ ನಿಮಗೆ ಇಷ್ಟ ಇಲ್ಲವೇ ?"

"ನಿನಗೆ ಸಮಯ ಹೋಗುವುದು ಅಷ್ಟು ಕಷ್ಟವಾಗಿದ್ದರೆ ಬೇಕಾದರೆ ಸೇರಿಕೋ. ನೀನೇ ಸಂಪಾದನೆ ಮಾಡೋಕೆ ಶುರುಮಾಡಿದ ಮೇಲೆ ನನ್ನ ಸಂಪಾದನೆ ಖರ್ಚಾಗುವುದು ಹೇಗೆ ?"

ರಾಮನಾಥನ ದನಿಯಲ್ಲಿ ಹಾಸ್ಯರಸವಿತ್ತು. ಆದುದರಿಂದ ಕಲ್ಯಾಣಿ ಉತ್ತೇಜಿತಳಾಗಿ

"ನಿಮ್ಮ ಅಪ್ಪನಿಗೆ ಕೊಡಿ. ಎಲ್ಲಾದರೂ ಸಾಲಕ್ಕೆ ಕೊಟ್ಟು ಬಡ್ಡಿ ವಸೂಲು ಮಾಡ್ತಾರೆ" ಎಂದಳು.

"ಅಮ್ಮ ಒಪ್ತಾರೋ ಇಲ್ಲವೋ ?"

"ನಾನು ಒಪ್ಪಿಸುತ್ತೀನಿ" ಎಂದಳು ಕಲ್ಯಾಣಿ.

'ಆದರೂ ಇನ್ನೊಂದು ಸಲ ಯೋಚಿಸು'

'ನಾನೆಲ್ಲಾ ಯೋಚಿಸಿದೀನಿ. ಮೂಲೆಮನೆ ರಂಗರಾಯರ ನಾದಿನಿ-ಅದೇ ಕಾಮೇಶ್ವರಮ್ಮನ ತಂಗಿ....ಗಂಡ ದುಡಿದು ತರುತ್ತಿದ್ದರೂ ಕೆಲಸಕ್ಕೆ ಸೇರಿಲ್ಲವೇ? ಹಾಗೇ....'

"ಯಾವ ಕಾಮೇಶ್ವರಮ್ಮ?"

"ಅದೇ ಬೀದಿಯಲ್ಲಿ, ಮಕ್ಕಳು ಸದಾ ಬರಿ ಮೈಲಿ ಆಟವಾಡ್ತಿರುತ್ತವಲ್ಲಾ ಅವು. ಅವತ್ತು ಆ ಮಕ್ಕಳನ್ನು ನೋಡಿ ನೀವೇ ಹೇಳಿದರಲ್ಲಾ ಮಕ್ಕಳಿಗೆ ಎಂಟು ವರ್ಷವಾಗುವವರೆವಿಗೆ ಬಟ್ಟೆ ಹೊಲಿಸುವುದು ಪಂಚ ಮಹಾಪಾತಕಗಳಲ್ಲೊಂದು ಎಂದು ಕಾಮೇಶ್ವರಮ್ಮ ತಿಳ್ಕೊಂಡಿದಾರೇಂತ"

"ಆಕೇನಾ ? ಸರಿ."

"ಅವರ ದೊಡ್ಡ ಮಗಳಿಗೆ ಒಂಭತ್ತು ವರ್ಷವಾಯಿತೂಂತ ಕಾಣುತ್ತೆ. ಈಗ ಲಂಗ ಹೊಲಿಸಿದ್ದಾರೆ" ಎಂದು ಕಲ್ಯಾಣಿ ಹೊಸ ಬಿಸಿ ಸುದ್ದಿಯೊಂದನ್ನು ಗಂಡನಿಗೆ ಹೇಳಿದಳು.

"ನೀನು ನನಗೆ ಇನ್ನೇನಾದರೂ ಹೇಳುವುದಿದೆಯೇ ?" ಎನ್ನುತ್ತಾ ರಾಮನಾಥ ಮತ್ತೆ ಪೇಪರನ್ನು ಕೈಗೆತ್ತಿಕೊಂಡ.

'ಇದೆ.'

"ಏನದು ?"

"ನಿಮ್ಮ ಬೆರಳುಗಳಲ್ಲಿ ಉಗುರು ತುಂಬಾ ಬೆಳೆದಿದೆ. ನಾನದನ್ನು ನೋಡಲಾರೆ. ದಯವಿಟ್ಟು ಕತ್ತರಿಸಿಕೊಳ್ಳಿ. ಇದು ನನ್ನ ಸಲಹೆ."

ರಾಮನಾಥ ಅವಳು ತೆಗಳಿದ ಉಗುರುಗಳಿಂದಲೇ ಆವಳ ಕೆನ್ನೆಯನ್ನು ಚಿವುಟಿ,

"ಜಾಣಮರಿ, ನಾನು ಸ್ವಲ್ಪ ಓದಬೇಕು. ಮಲಗಿಕೊಂಡಿರಮ್ಮ" ಎಂದ.

ಕಲ್ಯಾಣಿ ಹಗುರವಾದ ಹೃದಯದೊಡನೆ ಹೋಗಿ ಹಾಸಿಗೆಯ ಮೇಲೆ ಉರುಳಿಕೊಂಡಳು. ರಾಮನಾಥ ಓದುತ್ತಲೇ ಇದ್ದ. ಕಲ್ಯಾಣಿಗೆ ಯಾವಾಗಲೋ ನಿದ್ರೆ ಬಂದುಬಿಟ್ಟಿತ್ತು. ಹೆಂಡತಿಯ ಸುಖ ನಿದ್ದೆಗೆಲ್ಲಿ ಭಂಗ ಬರುವುದೋ ಎಂದು ರಾಮನಾಥ ರೂಮಿನ ದೀಪವನ್ನಾರಿಸಿ ರೂಮಿನಿಂದ ಸದ್ದಾಗದಂತೆ ವರಾಂಡಕ್ಕೆ ಬಂದು ದೀಪ ಹತ್ತಿಸಿದ.

ಆ ದಿನ ಅವನು ಒಂದೇಮನಸ್ಸಿನಿಂದ ಪೇಪರನ್ನೋದುವುದು ಸಾಧ್ಯವಾಗಲಿಲ್ಲ.

ಕಲ್ಯಾಣಿ ಕೆಲಸಕ್ಕೆ ಸೇರುವುದು ರಾಮನಾಥನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಹಾಗೆಂದು ಅವಳನ್ನು ಬಲವಂತವಾಗಿ ಮನೆಯಲ್ಲಿಯೇ ಉಳಿಸಿಕೊಳ್ಳುವುದೂ ಅವನಿಗೆ ಬೇಕಿರಲಿಲ್ಲ. ಅವಳ ಮನಸ್ಸನ್ನು ಯಾವ ರೀತಿಯಿಂದಲೂ ಅವನು ನೋಯಿಸಲಾರದವನಾಗಿದ್ದ.

ಮಾತು, ಕತೆ, ಸರಸ, ವಿಲಾಸ ಇಬ್ಬರಲ್ಲಿಯೂ ಕಮ್ಮಿಯಾಗಿತ್ತು. ನಿಜ. ಆದರೆ ಒಬ್ಬರಿಗೊಬ್ಬರಿಗೆ ನೋವನ್ನುಂಟುಮಾಡುವುದು ಯಾರಿಗೂ ಸಾಧ್ಯವಿರಲಿಲ್ಲ.

ಕಲ್ಯಾಣಿಯ ಮುಖ ಸ್ವಲ್ಪ ಕಳೆಗುಂದಿದರೂ ರಾಮನಾಥನ ಮನಸ್ಸಿನ ಉಲ್ಲಾಸ ಮರೆಯಾಗುತ್ತಿತ್ತು. ಊಟ ಮಾಡುವುದರಲ್ಲಿ ಒಂದು ತುತ್ತು ಗಂಡ ಕಡಿಮೆ ಉಂಡರೆ ಕಲ್ಯಾಣಿ ಕಳವಳಗೊಳ್ಳುತ್ತಿದ್ದಳು.

ಅವರ ಪ್ರೀತಿ ಉನ್ಮಾದದ ಹಂತವನ್ನು ದಾಟಿ ಈ ಮಟ್ಟಕ್ಕೆ ಬಂದು ನಿಂತಿತ್ತು.

'ಚಿನ್ನ, ರಾಣಿ ಅರಗಿಣಿ....' ಮುಂತಾದ ಪ್ರೀತಿಯ ಹೆಸರುಗಳಿಂದ ರಾಮನಾಥ ಹೆಂಡತಿಯನ್ನು ಮೊದಲು ಕರೆಯುತ್ತಿದ್ದ. ಕ್ರಮೇಣ ಅವೆಲ್ಲವೂ ಮರೆಯಾಗಿ ಕಲ್ಯಾಣಿ ಈಗ ಅವನಿಗೆ ಕೇವಲ 'ಕಲ್ಯಾಣಿ'ಯಾಗಿಯೇ ಉಳಿದಿದ್ದಳು. ಅವಳೂ ಗಂಡನನ್ನು 'ರಾಜ, ಮಾಸ್ಟರ್...." ಎಂದು ಕರೆಯುತ್ತಿದ್ದವಳು ಈಗ ಏನನ್ನೂ ಕರೆಯದೆ 'ಇಲ್ಲಿ ಸ್ವಲ್ಪ ಕೇಳಿ........ ಎಂದು ಮಾತಿಗೆ ಆರಂಭ ಮಾಡುತ್ತಿದ್ದಳು.

ರಾಮನಾಥ ಅವಳಿಗೆ ಮೊದಲಿನಂತೆ ದಿನವೂ ಹೂವನ್ನು ಕೊಂಡು ತರುತ್ತಿರಲಿಲ್ಲ. ಆದರೆ ಹೂವಿನಂತೆ ಅರಳಿ ಆರೋಗ್ಯ, ಯೌವನದ ಸೌರಭ

ಚೆಲ್ಲುತ್ತಿದ್ದ ಅವಳ ಮುಖ ನಸುಬಾಡಿದರೆ ಅವನು ಶಾಂತಿಯಿಂದಿರುತ್ತಿರಲಿಲ್ಲ.

ರಾಮನಾಥ ಮೊದಲಿನಂತೆ ಹೆಂಡತಿಗೆ ಅಲಂಕಾರ, ಬಟ್ಟೆ, ಬರೆಯ ವಿಷಯದಲ್ಲಿ ಸಲಹೆಯನ್ನು ಕೊಡುತ್ತಿರಲಿಲ್ಲ. ಹಾಗೂ ಅವಳು ಶೃಂಗರಿಸಿಕೊಂಡು ನಿಂತಾಗ ಮುನ್ನಿನ ಹಾಗೆ

"ಯಾರನ್ನಕೊಲ್ಲೋಕ್ಕೆ ಈ ಅಲಂಕಾರ? ನೀನು ಹೀಗೆ ಅಲಂಕಾರ ಮಾಡಿಕೊಂಡರೆ ನನ್ನ ಗತಿಯೇನು? ಬಡಪಾಯಿ! ಬೀದಿಯಲ್ಲಿ ಹೋಗುವ ಮನುಷ್ಯರು ನಿನಗೇನು ಮಾಡಿದರು...."

ಮುಂತಾಗಿ, ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಿದ್ದ.

ಈಗ ಕಲ್ಯಾಣಿ ಸುರಸುಂದರಿಯಂತೆ ಅಲಂಕರಿಸಿಕೊಂಡು ರಾಮನಾಥನ ಮುಂದೆ ಸುಳಿದಾಡಿದರೂ ರಾಮನಾಥ ಅವಳ ಕಡೆ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಅವಳು ಶೃಂಗರಿಸಿಕೊಂಡಿದ್ದಾಳೆ ಎಂಬುದರ ಅನುಭವವಾಗುತ್ತಲೇ ಅವನಿಗೆ ತೃಪ್ತಿಯಾಗುತ್ತಿತ್ತು.

ನಾಲ್ಕಾರು ದಿನಗಳ ಕಾಲ ಕಲ್ಯಾಣಿ ಅಲಂಕಾರದಲ್ಲಿ ಅನಾದರ ತೋರಿ, ವೇದಾಂತಿಯಂತೆ ಯಾವುದರಲ್ಲಿಯೂ ಆಸಕ್ತಿ ವಹಿಸದಿದ್ದಾಗ ರಾಮನಾಥನಿಗೆ ವ್ಯಥೆಯಾಗುತ್ತಿತ್ತು.

ಯಾಕೆ ಕಲ್ಯಾಣಿ ಈಚೆಗೆ ಮೊದಲಿನ ಹಾಗೆ ಅಲಂಕರಿಸಿಕೊಳ್ಳೋಲ್ಲ ಎಂದು ಅವನು ಯೋಚಿಸುತ್ತಿದ್ದ.

ಅವಳು ಶಾಂತವಾಗಿದ್ದರೆ ಅವನೂ ಶಾಂತಿಯಿಂದಿರುತ್ತಿದ್ದ. ಅವಳು ಕಂಬನಿ ಹರಿಯಿಸಿದ ದಿನ ನಿದ್ದೆ ಅವನಿಂದ ಬಹು ದೂರ ಓಡಿಹೋಗುತ್ತಿತ್ತು.

ರಾಮನಾಥ ಕ್ಲಬ್ಬಿಗೆ ಹೋಗುವುದಕ್ಕೇ ಹೊಂದಿಕೊಂಡಿದ್ದ. ಕಲ್ಯಾಣಿ ಈಗ ಒಂದು ದಿನ ಕ್ಲಬ್ಬಿಗೆ ಹೋಗದಿದ್ದರೆ 'ಹುಷಾರಾಗಿದ್ದಾರೋ ಇಲ್ಲವೋ' ಎಂದು ಮಿಡುಕುತ್ತಿದ್ದಳು.

ರಾಮನಾಥನಿಗೂ ಅವಳ ಮಿಡುಕಾಟ ತಿಳಿಯುತ್ತಿತ್ತು. ಕಲ್ಯಾಣಿಯನ್ನು ಯಾವ ರೀತಿಯಿಂದಲೂ ನೋಯಿಸಲಾರದ ರಾಮನಾಥ ಅವಳು ಕೆಲಸಕ್ಕೆ ಸೇರುವುದನ್ನು ಒಪ್ಪಿಕೊಂಡಿದ್ದ. ಆದರೆ ಅದು ಅವನಿಗೆ ಇಷ್ಟವಿರಲಿಲ್ಲ.

'ಹೂಂ.... ಭೇಟಿಗೆ ಕರೆ ಬಂದರೆ ಕೆಲಸ ಸಿಕ್ಕಿದ ಹಾಗಾಯಿತೆ? ಕೆಲಸ ಸಿಕ್ಕಿದ ಕಾಲಕ್ಕೆ ನೋಡಿಕೊಳ್ಳೋಣ' ಎಂದುಕೊಂಡು ರಾಮನಾಥ ಸಮಾಧಾನ ಮಾಡಿಕೊಂಡ.

ಒಂದು ಭಾನುವಾರ ಮಧ್ಯಾಹ್ನ ಕಲ್ಯಾಣಿಯನ್ನು ಸಮಿತಿಯವರು ಭೇಟಿಗೆ ಕರೆದದ್ದರಿಂದ ಆ ದಿನ ರಾಮನಾಥ ಮನೆಯಲ್ಲಿ ಇದ್ದ. ನಾಲ್ಕು ಗಂಟೆಗೆ ಸಂದರ್ಶನವಿದ್ದರೆ ಎರಡು ಗಂಟೆಗೆ ಕಲ್ಯಾಣಿಯ ಅಲಂಕಾರ ಮೊದಲಾಯಿತು.

ಮಧ್ಯಾಹ್ನದ ನಿದ್ದೆ ಮುಗಿಸಿ ಎದ್ದ ರಾಮನಾಥ ಹಾಸಿಗೆಯ ಮೇಲೆ ಮಲಗಿಕೊಂಡೇ ಅವಳ ಅಲಂಕಾರವನ್ನು ನೋಡುತ್ತಿದ್ದ. ಸುಮಾರು ಮೂರು ಗಂಟೆಯ ವೇಳೆಗೆ ಶೃಂಗಾರ ಮುಗಿಯಿತು. ಕಲ್ಯಾಣಿ ಚಪ್ಪಲಿ ಮೆಟ್ಟಿ ಗಂಡನ ಮುಂದೆ ನಿಂತು

'ಹೇಗಿದೀನಿ?' ಎಂದಳು.

'ಈಗ ನೀನು ಹೊರಟಿರುವುದು ಸೌಂದರ್ಯದ ಸ್ಪರ್ಧೆಗಲ್ಲವಲ್ಲಾ?'

"ಹೇಳೀಪ್ಪ, ನಾನು ಹೇಗಿದೀನೀಂತ. ಪೌಡರ್ ಜಾಸ್ತಿಯಾಗಿಲ್ಲ ತಾನೆ?"

"ಇಲ್ಲ. ನಿನಗೇನಾದರೂ ಕೆಲಸ ಸಿಕ್ಕಿದರೆ....?"

"ಹೂಂ...."

"ನಿನ್ನ ವಿದ್ಯಾರ್ಹತೆಗೆ ಮೆಚ್ಚಿ ಕೆಲಸಕೊಡೋಲ್ಲ. ಅದು ಸರಿ..... ಹೂಂ.... ನಿನ್ನ ಮುಖ ನೋಡಿ ಕೆಲಸ ಕೊಡಬಹುದು."

"ನನ್ನ ಕೆಲಸ ಅಂದರೆ ನಿಮಗೆ ತಾತ್ಸಾರ."

"ಹಾ....ಹಾ....ಕಮಿಟಿಯವರು 'ನೀವು ಏನು ಓದಿದೀರಿ' ಎಂಬ ಪ್ರಶ್ನೆ ಕೇಳಿದಾಗ ಹೀಗೆ ಬಿನ್ನಾಣ ಮಾಡು. ಮರೆಯಬೇಡ. ಅಲ್ಲಿಗೆ ಅವರು ಸುಸ್ತು; ಕತ್ತು ಕೊಂಕಿಸಿ, ಒಂದು ನಗು ನಕ್ಕು ಭುಜ ಕುಲುಕಿಸಿ, ಜಡೆ ಮುಂದಕ್ಕೆಳೆದು, ತಲೆ ತಗ್ಗಿಸಿ, ಕಣ್ಣೆತ್ತಿ ಅವರನ್ನು ನೋಡು. ಆಗ ಕೆಲಸ ನಿನ್ನದೇ. ಬರೆದಿಡು ಬೇಕಾದರೆ......'

ಕಲ್ಯಾಣಿ ಸಿಟ್ಟಿನಿಂದ ಹೊರಗೆ ಹೋದಳು. ರಾಮನಾಥ ಕೂಗಿದ 'ಗುಡ್ ಲಕ್' !

ಕಲ್ಯಾಣಿ ಉತ್ತರ ಕೊಡಲಿಲ್ಲ.

ಸಂದರ್ಶನ ಮುಗಿಸಿಕೊಂಡು ಕಲ್ಯಾಣಿ ಮನೆಗೆ ಬಂದಾಗ ಸಂಜೆ ಆರು ಗಂಟೆಯ ಸಮಯವಾಗಿತ್ತು. ರಾಮನಾಥ ಮನೆಯಲ್ಲಿರಲಿಲ್ಲ. ಕ್ಲಬ್ಬಿಗೆ ಹೋಗಿದ್ದ.

ರಾತ್ರಿ ಮನೆಗೆ ಬಂದ ಮೇಲೆ ಅವನು ಕಲ್ಯಾಣಿಯನ್ನು ಕೇಳಿದ ಮೊದಲನೆಯ ಪ್ರಶ್ನೆ:

'ಕಮಿಟಿಯ ಸದಸ್ಯರು ಗಂಡಸರೋ ಹೆಂಗಸರೋ?'

"ಇಬ್ಬರೂ ಇದ್ದರು."

"ಯಾರ ಸಂಖ್ಯೆ ಹೆಚ್ಚು?"

"ಗಂಡಸರು ಹೆಚ್ಚಾಗಿದ್ದರು."

"ಹಾಗಾದರೆ ನಿನಗೆ ಕೆಲಸವಾಯಿತೆಂದೇ ತಿಳಿ."

"ಏನಿಲ್ಲ. ನನಗೆ ಪರೀಕ್ಷೆಯಲ್ಲಿ ಬಂದಿದ್ದ ನಂಬರುಗಳನ್ನು ನೋಡಿ ಅವರೆಲ್ಲ ಡಂಗಾದರು."

"ನಿಜ ಹೇಳಮ್ಮ. ಅವರ ಡಂಗಾಗಿದ್ದು ನಿನ್ನ ಅಲಂಕಾರ, ಮುಖ ನೋಡಿ ಅಲ್ಲವೆ?"

"ಅಲ್ಲ."

"ಈ ಸೀರೆ ನಿನಗೆ ಒಪ್ಪುತ್ತೇಂತ ಹೇಳಲಿಲ್ಲವೆ?"

"ಊಹೂಂ. ನಾನು ಹೊರಗೆ ಬರುವಾಗ ಒಬ್ಬರು ಹೇಳಿದರು– ತುಂಬಾ ಸ್ಮಾರ್ಟ್ ಗರ್ಲ್ ಅಂತ...."

"ಹಾಗೆ ಬಾದಾರಿಗೆ. ಆಗಲೇ ಸದಸ್ಯರನ್ನು ಬುಟ್ಟಿಗೆ ಹಾಕಿಕೊಂಡೆ. ಸರಿ. ಕೆಲಸ ಸಿಕ್ಕಿದ ಮೇಲೆ ನನ್ನ ನೆನಪು ಇರುವುದೋ ಹೇಗೆ ಅಂತ ನನಗೆ ಯೋಚನೆಯಾಗಿ...."

ಕಲ್ಯಾಣಿ ಗಂಡನ ಕಡೆ ನೋಡಿದಳು.

ಅವನು ಆ ಮಾತನ್ನು ಪರಿಹಾಸ್ಯಕ್ಕಾಗಿ ಆಡಿದಂತಿರಲಿಲ್ಲ. ಆ ಮಾತನಾಡುವಾಗ ಅವನು ಗಂಭೀರವಾಗಿದ್ದ. ಕಣ್ಣುಗಳಲ್ಲಿ ಮಿನುಗುತ್ತಿದ್ದ ನಗೆಮಿಂಚು ಮಾಯವಾಗಿತ್ತು.

ಕಲ್ಯಾಣಿಗೆ ಕುಳಿತಲ್ಲಿಯೇ ಕೂರುವುದಾಗಲಿಲ್ಲ. ಅವಳು ಎದ್ದು

ವೈಯಾರದಿಂದ ಗಂಡನ ಬಳಿಗೆ ಬಂದು

'ನಿಜವಾಗಿಯೂ ಅಷ್ಟೊಂದು ಯೋಚನೆಯೇ ರಾಜ ?' ಎಂದಳು.

'ಹಾಗೇನಿಲ್ಲ. ಆದರೂ ನನಗೆ ಇದು ಯಾಕೋ ಸರಿಯಾಗಿ ಕಾಣೋದಿಲ್ಲ....'

"ನಿಮಗೆ ಅಷ್ಟೊಂದು ಬೇಜಾರಾದರೆ ಬಿಟ್ಟುಬಿಡ್ತೀನಿ."

ರಾಮನಾಥನಿಗೆ ತಾನು ಸ್ವಾರ್ಥಿ ಎನಿಸಿ ನಾಚಿಕೆಯಾಯಿತು.

'ಹೂಂ. ಇದೂ ಒಂದು ಅನುಭವ ಆಗಲಿ' ಎಂದ.

ಕಲ್ಯಾಣಿಯನ್ನು ಕಮಿಟಿಯವರು ಆರಿಸಿದ್ದರು. ಕೆಲಸಕ್ಕೆ ಆರ್ಡರ್ ಬಂದ ದಿನ ಕಲ್ಯಾಣಿ ಹಿಗ್ಗಿನಿಂದ ಕುಣಿದಾಡಿದಳು. ಇನ್ನು ಅತ್ತೆ, ಮಾವ ನಿಂದ ಈ ಸಂಗತಿಯನ್ನು ಮುಚ್ಚಿಡುವುದು ಸರಿಯಲ್ಲವೆನಿಸಿತು ಅವಳಿಗೆ.

ತಾನು ಕೆಲಸಕ್ಕೆ ಸೇರಿರುವ ಸಂಗತಿಯನ್ನು ಹಿರಿಯರಿಗೆ ತಿಳಿಸುವಂತೆ ರಾಮನಾಥನನ್ನು ಕೇಳಿಕೊಂಡಳು ಕಲ್ಯಾಣಿ.

"ನೀನೇ ಹೇಳು."

"ನೀವು ಹೇಳಿ. ಆಮೇಲೆ ನಾನು ಹೇಳ್ತೀನಿ."

"ನಾನು ಹೇಳಿದ ಮೇಲೆ ನೀನು ಹೇಳೋದೇನಿದೆ ?"

"ನಿಮ್ಮ ದಮ್ಮಯ್ಯ. ಇದೊಂದು ಸಲ ನನ್ನ ಕಾಪಾಡಿ. ನಂಗೋಸ್ಕರ....ನಂಗೋಸ್ಕರ...."

"ನೀನು ನುಸುಳಿಕೊಂಡು ತಪ್ಪನ್ನೆಲ್ಲಾ ನನ್ನ ತಲೆಯ ಮೇಲೆ ಹಾಕಿಬಿಡಬಾರದು"

"ಖಂಡಿತ ಹಾಗೆ ಮಾಡೋದಿಲ್ಲ" ಎಂದು ಗಂಡನಿಗೆ ಅಭಯವಿತ್ತಳು ಕಲ್ಯಾಣಿ.

ರಾತ್ರಿ ಎಲ್ಲರೂ ಊಟಕ್ಕೆ ಕುಳಿತಿದ್ದರು. ಸಾತಮ್ಮ ಗಂಡನಿಗೆ ಬಡಿಸುವಾಗ ರಾಮನಾಥ ಪೀಠಿಕೆ ಹಾಕಿದ.

"ಅಮ್ಮ, ನಿನಗೊಂದು ಸಂತೋಷದ ಸುದ್ದಿ ಹೇಳಲಾ ?"

ಸಾತಮ್ಮ ತಟ್ಟನೆ ನಿಂತು ಮಗನ ಕಡೆ ನೋಡಿದರು. ತಮಗೆ ಸಂತೋಷ ಕೊಡುವಂತಹ ಸುದ್ದಿ ಯಾವುದು? ಬಹುಶಃ ಕಲ್ಯಾಣಿ....

ಸಾತಮ್ಮನ ಮುಖ ಊರಗಲವಾಯಿತು.

"ಲೇ ಕಳ್ಳೀ, ನನಗೆ ಹೇಳಲೇಬೇಡವೆ?" ಎಂದರಾಕೆ ಸೊಸೆಯನ್ನು ಆಕ್ಷೇಪಿಸುವವರಂತೆ.

"ನಿನಗೆ ಹೇಳದೇ ಇನ್ನಾರಿಗೆ ಹೇಳಬೇಕಮ್ಮ?"

"ಹಾಗಾದರೆ ಇಷ್ಟು ದಿನ ಯಾಕೆ ಮುಚ್ಚಿಟ್ಟಿದ್ದಳು?"

"ಮುಚ್ಚಿಡೋದೇನು ಬಂತು? ಆಮೇಲಾದರೂ ತಿಳಿದೇ ತಿಳಿಯುತ್ತೆ."

"ಸಧ್ಯ, ದೇವರು ನಮ್ಮನ್ನು ಕಣ್ಣು ಬಿಟ್ಟು ನೋಡಿದ. ಎಲ್ಲ ಸುಖವಾಗಿ ಕಳೆದರೆ ಆದೀತು. ತಿರುಪತಿ ದೇವರಿಗೆ ಇವತ್ತೇ ಹರಕೆ ತೆಗೆದಿಡುತ್ತೇನೆ...."

ಕಲ್ಯಾಣಿಯ ಮುಖ ಕೆಂಪಾಯಿತು. ಗಂಡ ಏನೋ ಹೇಳಬೇಕೆಂದಿರುವುದನ್ನು ಅತ್ತೆ ಬೇರೆ ಬಣ್ಣ ಕೊಟ್ಟು ನೋಡುತ್ತಿದ್ದಾರೆಂದರಿತು ಅವಳು ಸಂಕೋಚದಿಂದ ರಾಮನಾಥನ ಕಿವಿಯಲ್ಲಿ ಪಿಸುಗುಟ್ಟಿದಳು.

"ಅವರ ಸಂದೇಹ ಪರಿಹಾರ ಮಾಡಿ, ಅವರು ಏನೇನೋ ಅರ್ಥ ಮಾಡಿಕೊಳ್ಳುತ್ತಿದ್ದಾರೆ."

"ಸಂದೇಹ! ಹಾಗೆಂದರೇನು?"

"ನೀವು ಮೊದಲು ಅವರಿಗೆ ಹೇಳೋದನ್ನು ಹೇಳಿ."

"ಅಮ್ಮ, ಕಲ್ಯಾಣಿಗೆ ಕೆಲಸಕ್ಕೆ ಕರೆ ಬಂದಿದೆ...." ರಾಮನಾಥ ತನ್ನ ಮಾತನ್ನು ಮುಂದುವರಿಸಿದ.

"ಕೆಲಸ? ಏನು ಕೆಲಸ?"

ಸಾತಮ್ಮ ಚಕಿತರಾಗಿ ಕೇಳಿದರು.

"ಈ ಊರಿನ ಹೈಸ್ಕೂಲೊಂದರಲ್ಲಿ ಕಲ್ಯಾಣಿಗೆ ಕೆಲಸ ಸಿಕ್ಕಿದೆ...."

"ಅವಳು ಕೆಲಸ ಮಾಡುವಂತಹದೇನು ಬಂದಿದೆಯೋ?" ಎಂದು ಸಾತಮ್ಮ ಉದ್ಗಾರವೆತ್ತಿದರು. ನಿರಾಶೆ ಅವರ ಮುಖದಲ್ಲಿ ತಾಂಡವ ನೃತ್ಯವಾಡಿತು.

"ಸಮಯ ಹೋಗೋಲ್ಲವಂತೆ ಅವಳಿಗೆ. ನಾಲ್ಕು ದಿನ ಹೋಗಲಿ. ಬೇಜಾರಾದರೆ ಬಿಟ್ಟುಬಿಡ್ತಾಳೆ."

"ಸಂಬಳ ಎಷ್ಟಂತೆ?"

ಇದುವರೆಗೂ ಮೌನವಾಗಿದ್ದ ಶೇಷಯ್ಯನವರು ಬಹು ಮುಖ್ಯವಾದ ಪ್ರಶ್ನೆಯನ್ನು ಕೇಳಿದರು.

"ಎಪ್ಪತ್ತೈದು ರೂಪಾಯಿ ಈಗ ಕೊಡ್ತಾರೆ."

"ಅಷ್ಟೇನೆ? ಸಾಲದು!"

"ಇದರಲ್ಲಿ ಚೌಕಶಿ ಮಾಡೋಕಾಗೋದಿಲ್ಲ."

ಶೇಷಯ್ಯನವರಿಗೆ ಸೊಸೆ ಕೆಲಸಕ್ಕೆ ಸೇರುತ್ತಾಳಲ್ಲಾ ಎಂಬ ಯೋಚನೆಗಿಂತಲೂ ಹಣ ಸಂಪಾದಿಸುತ್ತಾಳೆ ಎಂಬ ಹಿಗ್ಗು ಹೆಚ್ಚಾಗಿತ್ತು. ಅವರು ಹೆಂಡತಿಯ ಕಡೆ ತಿರುಗಿ "ಸೇರಿಕೊಳ್ಳಲಿ ಬಿಡು. ಮನೆಯಲ್ಲಿ ಕುಳಿತು ಕಾಡು ಹರಟೆ ಹರಟುವುದಕ್ಕಿಂತ ವಿದ್ಯಾದಾನವಾದರೂ ಮಾಡಲಿ" ಎಂದರು.

ಮಾವನಾದರೂ ತನ್ನ ಪರ ವಹಿಸಿ ಮಾತನಾಡಿದುದನ್ನು ಕಂಡು ಕಲ್ಯಾಣಿಗೆ ಧೈರ್ಯವಾಯಿತು.

ಆದರೆ ಸಾತಮ್ಮನಿಗೆ ಸೊಸೆ ಕೆಲಸಕ್ಕೆ ಸೇರುವುದು ಸಮ್ಮತವಿರಲಿಲ್ಲ. ಮರ್ಯಾದಸ್ಥರ ಮನೆಯವರು ಯಾರೂ ಹೊರಗೆ ಹೋಗಿ ದುಡಿಯುವುದಿಲ್ಲ ವೆಂದು ಅವರು ಭಾವಿಸಿದ್ದರು.

ಕಲ್ಯಾಣಿಗೆ ಗಂಡನ ಬೆಂಬಲ, ಮಾವನ ಉತ್ತೇಜನವಿತ್ತು. ಯಾರೆಷ್ಟು ವಿರೋಧಿಸಿದರೂ ತಾನು ಕೆಲಸಕ್ಕೆ ಸೇರಿಯೇ ತೀರುವೆನೆಂಬ ಕೆಚ್ಚಿತ್ತು ಸೊಸೆಯ ಮುಖದಲ್ಲಿ.

ಅವರು ನಿರುಪಾಯರಾಗಿ, ಅಸಹಾಯಕರಂತೆ ಹೂಗುಟ್ಟಿದ್ದರು. ತನ್ನಾಸೆ ಇಷ್ಟು ಸುಲಭವಾಗಿ ಈಡೇರುವುದೆಂದು ಕಲ್ಯಾಣಿ ತಿಳಿದಿರಲಿಲ್ಲ. ಹಾಗೂ ಅತ್ತೆಯ ಮನಸ್ಸಿನಲ್ಲಿದ್ದ ಅಸಮಾಧಾನದ ಹೊಗೆಯನ್ನು ತನಗಾದ ಸಂತೋಷದಲ್ಲಿ ಕಾಣಲಿಲ್ಲ.

* * *

ಕಲ್ಯಾಣಿ ಕೆಲಸಕ್ಕೆ ಹೊರಟ ದಿನದ ಸಂಭ್ರಮವಂತೂ ಹೇಳತೀರದು. ಮದುವೆಯಾದ ತರುಣದಲ್ಲಿ ಅವಳು ಗಂಡನೊಡನೆ ಏಳುತ್ತಿದ್ದರೂ ಕ್ರಮೇಣ ತನ್ನ ನಿದ್ದೆ ಮುಗಿಸಿಯೇ ಅವಳು ಏಳುತ್ತಿದ್ದಳು.

ಆದರೆ ಈಗ ಕೆಲಸಕ್ಕೆ ಸೇರಿದ ದಿನ ಕಲ್ಯಾಣಿಗೂ ರಾಮನಾಥನೊಡ

ನೆಯೇ ಬೆಳಗಾಯಿತು.

'ಹನ್ನೊಂದು ಗಂಟೆಗೆ ಸ್ಕೂಲಿದ್ದರೆ ಈಗಿನಿಂದ ಯಾಕ್ರಿ ಏಳ ಬೇಕು?' ಎಂದ ರಾಮನಾಥ.

"ನಮ್ಮ ತಯಾರಿ ಎಷ್ಟೋ ಇರುತ್ತದೆ."

"ಹೌದು. ಸೋಪು ಹಾಕಿ ಮುಖ ತೊಳೆಯೋಕೆ ಅರ್ಧ ಗಂಟೆ. ತಲೆ ಬಾಚಿ ಎರಡು ಜಡೆ ಹಾಕೋಕೆ ಒಂದು ಗಂಟೆ. ಸ್ನೋ ಹಚ್ಚೋಕೆ ಮುಕ್ಕಾಲು ಗಂಟೆ. ಪೌಡರ್‌ಗೆ......ಎಷ್ಟು ಹೊತ್ತಾದರೂ ಸಾಲದು. ಸೀರೆ, ರವಿಕೆ ಆರಿಸೋಕೆ ಅರ್ಧ ಗಂಟೆ. ಉಡೋಕೆ...."

"ನನ್ನ ಕೀಟಲೆ ಮಾಡುತ್ತಾ ಕೂತಿರಿ. ನಿಮ್ಮ ಬಸ್ಸು ತಪ್ಪಿ ಹೋಗುತ್ತೆ."

"ನಾನಿವತ್ತು ರಜ ತೆಗೆದುಕೊಳ್ಳೋಣಾಂತ ನೋಡಿದೆ. ಆದರೆ ರಜ ಸಿಕ್ಕಲಿಲ್ಲ. ಎಂಥ ಅಪೂರ್ವ ದೃಶ್ಯ ತಪ್ಪಿಹೋಯಿತು!"

"ನೀವು ಹೇಳುವುದೆಲ್ಲ ಮುಗಿಯಿತೋ?"

"ಇಲ್ಲ. ಇನ್ನೊಂದು ಮಾತು ಬಾಕಿಯಿದೆ. ಕಾಲಿನ ಉಗುರಿಗೆ ಹಚ್ಚಿಕೊಂಡಿದ್ದ ಬಣ್ಣ ಮಾಸಿಹೋಗಿದೆ. ಮತ್ತೊಮ್ಮೆ ಹೊಸತಾಗಿ ಹಾಕಿಕೊಂಡರಾದೀತು."

"ನಿಮ್ಮನ್ನು ಕೆಲವು ಸಲ ನಾನು ಹೇಟ್ ಮಾಡ್ತೀನಿ."

"ಧನ್ಯವಾದಗಳು" ಎನ್ನುತ್ತಾ ರಾಮನಾಥ ಸ್ನಾನಕ್ಕೆ ಹೋದ.

ಕಲ್ಯಾಣಿ ಕೆಲಸಕ್ಕೆ ಹೊರಟು ನಿಂತಾಗ ನಿಜವಾಗಿಯೂ ರಾಮನಾಥ ಇದ್ದಿದ್ದರೆ ಎನಿಸಿತು.

ಸಾತಮ್ಮನದು ಎಷ್ಟಾದರೂ ಹೆಂಗರಳು. ಸೊಸೆ ಒಂದು ಗಳಿಗೆಯೂ ಹಸಿವು ತಡೆಯಲಾರಳೆಂದು ಅವರಿಗೆ ಗೊತ್ತು.

"ಕಲ್ಯಾಣಿ, ಮನೆಗೆ ಬರುವುದು ಸಂಜೆ ಆರು ಗಂಟೆಯ ಮೇಲಾಗ ಬಹುದು. ಟಿಫಿನ್ ಕ್ಯಾರಿಯರ್‌ಲಿ ಸ್ವಲ್ಪ ಮೊಸರನ್ನ ತಗೊಂಡು ಹೋಗು" ಎಂದು ಅವರು ಸೊಸೆಗೆ ಬಲವಂತ ಮಾಡಿದರು.

ಥೂ, ಕ್ಯಾರಿಯರ್‌ನಲ್ಲಿ ಅನ್ನ ತೆಗೆದುಕೊಂಡು ಹೋಗಲು ತಾನೇನು ಮಿಡಲ್ ಸ್ಕೂಲ್ ವಿದ್ಯಾರ್ಥಿನಿಯೇ? ತಾನು ಮೇಡಂ ಎನಿಸಿಕೊಂಡು

ಠಾಕು ಠೀಕಾಗಿ ಹೋಗುವುದನ್ನು ಬಿಟ್ಟು....

"ಬೇಡಿ ಬೇಡಿ" ಎಂದಳು ಕಲ್ಯಾಣಿ.

ನವಿಲುಗರಿಗಳನ್ನು ಪ್ರಿಂಟು ಹೊಡೆದಿದ್ದ ಷಿಫಾನ್ ಸೀರೆಯನ್ನುಟ್ಟು, ಇಳಿಗೊರಳಿನ ಮಕಮಲ್ಲಿನ ಚೋಲಿ ತೊಟ್ಟು ಕಲ್ಯಾಣಿ ಮನೆಯ ಮೆಟ್ಟಿಲನ್ನಿಳಿಯುವಾಗ ಶಾರದ ಎದುರಿಗೆ ಬಂದಳು.

ಕಲ್ಯಾಣಿಯನ್ನು ಕಂಡು ತನ್ನ ಮೂವತ್ತೆರಡು ಹಲ್ಲುಗಳನ್ನೂ ಪ್ರದರ್ಶಿಸಿ ಶಾರದ ಕೇಳಿದಳು.

"ಎಲ್ಲಿಗೆ ಹೋಗ್ತೀಯೇ? ಫೋಟೋ ತೆಗೆಸಿಕೊಳ್ಳೋದಕ್ಕಾ?"

ಕಲ್ಯಾಣಿಗೆ ಅವಳ ಹಲ್ಲುದುರಿಸಿ ಬಿಡುವಷ್ಟು ಕೋಪ ಬಂತು.

ಕೆಲಸಕ್ಕೆ ಹೊರಟ ಮೊದಲನೆಯ ದಿನ ಒಂಟಿ ಮುತ್ತೈದೆ—ಅದೂ ಗಂಡ ಬಿಟ್ಟವಳು 'ಎಲ್ಲಿಗೆ' ಎಂದು ಕೇಳಿ ಅಪಶಕುನ ನುಡಿದಳಲ್ಲಾ!

"ಎಲ್ಲಿಗೋ ಸುಡುಗಾಡಿಗೆ" ಎಂದು ಸಿಡುಕಿದಳು ಕಲ್ಯಾಣಿ.

"ನೀನು ಹೋದರೂ ಚಿಂತೆಯಿಲ್ಲ. ಆದರೆ ಜೊತೆಯಲ್ಲಿ ಅಷ್ಟೊಂದು ಒಳ್ಳೆಯ ಸೀರೆ, ರವಿಕೇನ ತಗೊಂಡು ಹೋಗಬೇಡ, ಅನ್ಯಾಯವಾಗಿ ಹಾಳಾಗತ್ತೆ."

"ನಿನ್ನ ಜೋಕ್ಸ್‌ಗೆ ಬೆಂಕಿ ಹಾಕಿದರು."

"ನೀನ್ಯಾಕೆ ಬೆಂಕಿ ಬೆಂಕಿಯಾಗಿದೀಯಾ?"

"ಸಂಜೆಗೆ ಬಾ. ಎಲ್ಲ ಹೇಳ್ತೀನಿ" ಎನ್ನುತ್ತಾ ಕಲ್ಯಾಣಿ ಹಿಂತಿರುಗಿ ನೋಡದೆ ಮೆಟ್ಟಲಿಳಿದು ಹೋದಳು.

ಶಾರದ ಅಸೂಯೆಯಿಂದ....ಮೆಚ್ಚುಗೆಯಿಂದ ಕಲ್ಯಾಣಿಯ ಕಡೆಯೇ ನೋಡುತ್ತಿದ್ದಳು.

ಕಲ್ಯಾಣಿ ಬಣ್ಣದಿಂದಾಗಲಿ, ಕಣ್ಣುಮೂಗಿನಿಂದಾಗಲಿ ಚೆನ್ನಾಗಿರಲಿಲ್ಲ.

ಒಟ್ಟಿನಲ್ಲಿ ಏನೋ ಒಂದು ಬಗೆಯ ಆಕರ್ಷಕ ವ್ಯಕ್ತಿತ್ವ ಅವಳದು. ಆ ಲಾವಣ್ಯಕ್ಕೆ ಇತರರು ಮರುಳಾಗುತ್ತಿದ್ದರು. ಮಾತು, ನಡಿಗೆ, ನೋಟ, ನಗು ಎಲ್ಲವೂ ಬೆಡಗಿನ ತೆಳು ಮುಸುಕಿನಲ್ಲಿಯೇ.

"ಬಾಮ್ಮ ಒಳಗೆ, ಬಿಸಿಲಿನಲ್ಲಿ ಯಾಕೆ ನಿಂತಿದೀಯಾ?" ಎಂದು

ಸಾತಮ್ಮ ಕೂಗಿದಾಗ ಶಾರದ ಎಚ್ಚರಗೊಂಡಳು.

ಸಂಜೆ ಕಲ್ಯಾಣಿ ಮನೆಗೆ ಬರುವಾಗ ಆರು ಗಂಟೆಯಾಗಿತ್ತು. ರಾಮನಾಥ ಕ್ಲಬ್ಬಿಗೂ ಹೋಗದೆ ಮನೆಯಲ್ಲಿ ಅವಳಿಗಾಗಿ ಕಾಯು ತ್ತಿದ್ದ.

ಕಲ್ಯಾಣಿ ಮನೆಗೆ ಬಂದವಳೇ ದೊಪ್ಪನೆ ಒಂದು ಕಡೆ ಕುಳಿತಳು.

"ಹೇಗಿತ್ತು ಅಮ್ಮಾವರೆ?"

"ಇದೇನು! ಇನ್ನೂ ಮನೇಲಿದೀರಾ?"

"ನಿನಗೋಸ್ಕರ ಕ್ಲಬ್ಬಿಗೂ ಹೋಗದೆ ಕಾಯ್ತಿದೀನಿ."

"ಎಂತಹ ತ್ಯಾಗ!"

"ಅಣಕ ಸಾಕು. ಸ್ಕೂಲು ಹೇಗಿತ್ತು?"

'ಸೊಗಸಾಗಿತ್ತು. ಇವತ್ತು ಸಮಯ ಹೇಗೆ ಹೋಯಿತೆನ್ನುವುದೇ ಹೀಗೇ ತಿಳಿಯಲಿಲ್ಲ. ಯಾವಾಗಲೂ ಇರಬೇಕಪ್ಪ.'

"ಒಟ್ಟಿನಲ್ಲಿ ಬೇಜಾರಾಗಲಿಲ್ಲಾನ್ನು."

"ಊಹೂಂ"

"ನಾನು ಹೋಗಿ ಬರಲಾ ಕ್ಲಬ್ಬಿಗೆ?"

"ಓಹೋ."

ರಾಮನಾಥ ಕ್ಲಬ್ಬಿಗೆ ಹೊರಟುಹೋದ. ಕಲ್ಯಾಣಿಗೆ ಬಟ್ಟೆ ಬದಲಾಯಿಸಲೂ ಅವಕಾಶ ಕೊಡಲಿಲ್ಲ ಅವಳ ಹಸಿವು. ಪ್ರತಿ ದಿನವೂ ಗಂಟೆಗೆ ಸರಿಯಾಗಿ ಊಟ, ತಿಂಡಿ, ನಿದ್ರೆ ಮಾಡುತ್ತಿದ್ದ ಅವಳು ಮಧ್ಯಾಹ್ನದ ಕಾಫಿ, ತಿಂಡಿ ತಪ್ಪಿದ್ದರಿಂದ ಹಸಿವಿನಿಂದ ಕುಗ್ಗಿ ಹೋಗಿದ್ದಳು. ಹೆಚ್ಚಿಗೆ ಮಾತನಾಡಲೂ ಅವಳಲ್ಲಿ ಉಸಿರು ಇರಲಿಲ್ಲ. ಸ್ಕೂಲಿನ 'ಕ್ಯಾನ್‌ಟೀನ್'ನ ತಿಂಡಿ ತಿನ್ನಲು ಯತ್ನಿಸಿ ಕಲ್ಯಾಣಿ ವಿಫಲಳಾಗಿದ್ದಳು. ರುಚಿ ರುಚಿಯಾದ ತಿಂಡಿಗಳನ್ನು ಮಾತ್ರ ಕಂಡಿದ್ದ ನಾಲಿಗೆ ಕಳಪೆ ತಿಂಡಿಯನ್ನು ತಿನ್ನಲು ಒಪ್ಪಿಕೊಂಡಿರಲಿಲ್ಲ.

ಕಲ್ಯಾಣಿಯ ಬಳಲಿದ ಮುಖ ಕಂಡು ಸಾತಮ್ಮ ಅವಳು ಕುಳಿತಿರುವಲ್ಲಿಗೆ ತಿಂಡಿ ಕಾಫಿ ತಂದುಕೊಟ್ಟರು.

ಸೊಸೆ ಒಂದು ದಿನಕ್ಕೇ ಬಹಳ ಇಳಿದುಹೋಗಿರುವಳೆಂದು ಅವರ

ಭಾವನೆ. ಏನೋ ಹೇಳಲು ಹೊರಟವರು ಅತ್ಯಂತ ಪ್ರಯಾಸದಿಂದ ತಮ್ಮ ಮಾತನ್ನು ನುಂಗಿಕೊಂಡರು.

ಮರು ದಿನದಿಂದ ಪಾಠದ ಸಿದ್ಧತೆ. ನೋಟ್ಸ್ ಬರೆಯುವಿಕೆ, ಹೋಂ ವರ್ಕ್‌ಗಳನ್ನು ತಿದ್ದುವುದು ಮೊದಲಾದವು ಪ್ರಾರಂಭವಾದವು.

ಈಗ ಕಲ್ಯಾಣಿಗೆ ಬೆಳಗಿನಿಂದ ರಾತ್ರಿ ಕಣ್ಣಿಗೆ ನಿದ್ದೆ ಹತ್ತುವವರೆವಿಗೆ ಕೆಲಸ. ಹೊಸದರಲ್ಲಿ ಅಗಸ ಎನ್ನುವ ಹಾಗೆ ಅವಳಿಗೆ ತನ್ನ ಪ್ರತಿಯೊಂದು ವಿಷಯದಲ್ಲೂ ತುಂಬ ಜಾಗರೂಕತೆ.

ಪರೀಕ್ಷೆಗೆ ಹೊರಡುವ ವಿದ್ಯಾರ್ಥಿಯಂತೆ ಪ್ರತಿ ದಿನವೂ ಮನೆಯಲ್ಲಿ ತಾನು ಸಿದ್ಧಳಾಗುತ್ತಿದ್ದಳು.

"ಹುಡುಗರಿಗೆ ಒಂದು ದಿನ ಪರೀಕ್ಷೆಯಾದರೆ ನಮಗೆ ಪ್ರತಿ ದಿನವೂ ಪರೀಕ್ಷೆ" ಎಂದು ಕಲ್ಯಾಣಿ ಆಗಾಗ್ಗೆ ರಾಮನಾಥನ ಕೈಲಿ ಜಂಭದಿಂದ ಹೇಳಿಕೊಳ್ಳುತ್ತಿದ್ದಳು.

ಪಾಠ, ಪ್ರವಚನಗಳಲ್ಲಿ ಎಷ್ಟೇ ಸಿದ್ಧತೆ ನಡೆಸಿದರೂ ಎಂಟೂವರೆ ಯಾಗುತ್ತಲೇ ಕಲ್ಯಾಣಿ ಎಲ್ಲವನ್ನೂ ಬಿಟ್ಟು ಉಳಿದ ಸಮಯವನ್ನು ತನ್ನ ಅಲಂಕಾರಕ್ಕಾಗಿ ವಿನಿಯೋಗಿಸುತ್ತಿದ್ದಳು.

ಹಳಸಲಾಗಿ ಹೋಗುವುದು ಅವಳಿಂದ ಖಂಡಿತ ಸಾಧ್ಯವಿರಲಿಲ್ಲ.

ಒಂದು ದಿನ ಸ್ವಲ್ಪ ಬೇಗ ಮನೆಗೆ ಬಂದ ಕಲ್ಯಾಣಿಯನ್ನು ಇನ್ನೂ ಕ್ಲಬ್ಬಿಗೆ ಹೊರಡುವುದರಲ್ಲಿದ್ದ ರಾಮನಾಥ ಕೇಳಿದ.

"ನಿಮ್ಮ ಸ್ಕೂಲಿನಲ್ಲಿ ಗಂಡಸರು ಮೇಷ್ಟರು ಇದಾರಾ?"

"ಯಾಕೆ?"

"ಇದಾರೇನು ಹೇಳು."

"ಹೂಂ ಹಿಂದಿ, ಸಂಗೀತಕ್ಕೆ ಇದಾರೆ"

"ಆದಕ್ಕೇ ಅಲಂಕಾರ ಇಷ್ಟೊಂದು ಜೋರು."

"ನಿಮ್ಮ ಬಗ್ಗೆ ನನ್ನ ಅಭಿಪ್ರಾಯವೇನು ಗೊತ್ತಾ?"

"ಏನು?" ಕುತೂಹಲ ಅವನಿಗೆ.

"ಹ....ಈಗ ಬೇಡ. ನನಗೀಗ ಎಷ್ಟು ಕೋಪ ಬಂದಿದೆಯೆಂದರೆ ಏನೇನಾದರೂ ಮಾತನಾಡಿಬಿಡಬಹುದು. ನೀವು ದಯವಿಟ್ಟು ಕ್ಲಬ್ಬಿಗೆ

ಹೋಗಿ, ನಾನು ಸ್ವಲ್ಪ ಸಮಾಧಾನವಾಗ್ತೀನಿ"

"ನಿಜವಾಗಿಯೂ ಸಿಟ್ಟು ಬಂತೇನೆ?"

"ಮತ್ತೆ ಹಾಗೆಲ್ಲಾ ಮಾತನಾಡಿದರೆ ಸಿಟ್ಟು ಬರೋದಿಲ್ವಾ? ನೀವು ಫ್ಯಾಕ್ಟರಿಗೆ ಟ್ರಿಮ್ ಆಗಿ ಹೋಗ್ತೀರಲ್ಲಾ? ಅಲ್ಲಿರುವ ಆಂಗ್ಲೋ ಇಂಡಿಯನ್ ಹುಡುಗಿಯರು, ಟೈಪಿಸ್ಟ್ಸನ ಮೆಚ್ಚಿಸೋಕೆ ಹಾಗೆ ಹೋಗ್ತೀರಾ ಹೇಳಿ?"

"ಅವರ ಸೆಂಟು ವಾಸನೆಯಿಂದ ಆದಷ್ಟು ದೂರ ಓಡಿಹೋಗೋಣ ಎನಿಸುತ್ತದೆ."

"ನೀವೂ ಹಿಂದಿ, ಸಂಗೀತದ ಮೇಷ್ಟರನ್ನನೋಡಿಲ್ಲಾಂತ ಕಾಣುತ್ತೆ. ಸಂಗೀತದ ಮೇಷ್ಟರು ಪಾಪ! ಕುರುಡರು ಅವರನ್ನು ಕಂಡರೆ ನಮಗೆಲ್ಲಾ ತುಂಬಾ ಮರುಕ. ಇನ್ನು ಹಿಂದಿಯ ಮೇಷ್ಟರು—ನನಗಿಂತ ಚಿಕ್ಕ ಹುಡುಗ. ನಮ್ಮ ಸ್ಕೂಲಿನಲ್ಲಿ ಎಲ್ಲ ಉಪಾಧ್ಯಾಯರುಗಳಿಗಿಂತಲೂ ಅವನು ಚಿಕ್ಕವನು; ಹದಿನೆಂಟು ವರ್ಷವಿರಬಹುದು. ಮುಂದಿನ ವರ್ಷ ಕಾಲೇಜಿಗೆ ಸೇರಿ ಕೊಳ್ಳುವ ಆಸೆಯಿಂದ ಈ ವರ್ಷ ಇಲ್ಲಿ ದುಡಿಯುತ್ತಿದ್ದಾನೆ. ನಾವೆಲ್ಲಾ ಅವನನ್ನ ಚಿಕ್ಕ ತಮ್ಮನ್ನ ಕೀಟಲೆ ಮಾಡುವ ಹಾಗೆ ಮಾಡ್ತೀವಿ. ನಮ್ಮ ಮನೆಗೆ ಕರೆದಿದೀನಿ-ಒಂದು ದಿವಸ ಬಾಂತ. ಅವತ್ತು ನೀವೇ ನೋಡು ವಿರಂತೆ. ಒಳ್ಳೆಯ ಹುಡುಗ."

"ನಿನಗೆ ಯಾರು ಕೆಟ್ಟವರು ಹೇಳು?"

"ನೀವು" ಎನ್ನುತ್ತಾ ಕಲ್ಯಾಣಿ ನಕ್ಕಳು. ಅವಳು ನಕ್ಕಾಗ ಕಣ್ಣು ಗಳು ಎಂದಿನಂತೆ ಕೆನ್ನೆಯ ಆಳದಲ್ಲಿ ಹುದುಗಲಿಲ್ಲವೆನಿಸಿತು ರಾಮನಾಥನಿಗೆ. ದುಂಡಗಿನ ಕೆನ್ನೆಯಿಂದಾಗಿ ಕಲ್ಯಾಣಿ ನಕ್ಕಾಗ ಕಣ್ಣುಗಳು ಸಂಪೂರ್ಣ ಮುಚ್ಚಿಹೋಗುತ್ತಿದ್ದವು. ಆದರೆ ಈಗ ಹಾಗಾಗಲಿಲ್ಲ.

"ಯಾಕೋ ಬೇಜಾರು ಕಲ್ಯಾಣಿ ಎಲ್ಲಿಗಾದರೂ ಹೋಗೋಣ ಬರ್ತೀಯಾ?"

"ನಂಕೈಲಾಗೋದಿಲ್ಲಾಪ್ಪಾ. ಸ್ಕೂಲಿನಲ್ಲಿ ನಾಲ್ಕು ಗಂಟೆಗಳ ಕಾಲ ಪಾಠ ಹೇಳಿಕೊಟ್ಟು ಸಾಕಾಗಿ ಹೋಗಿದೆ. ಹಾಳು ಬಸ್ಸು ಬೇರೆ ಸರಿಯಾಗಿ ಸಿಕ್ಕಲಿಲ್ಲ. ಸಾರಿ."

ರಾಮನಾಥನಿಗೆ ಕೊಂಚ ನಿರಾಶೆಯಾಯಿತು. ಕಲ್ಯಾಣಿ ಎಂದೂ

ಅವನಿಗೆ ಹಾಗೆ ಉತ್ತರ ಕೊಟ್ಟಿರಲಿಲ್ಲ. ಅವನ ಮುಖದ ಮೇಲಾಡಿದ ನಿರಾಶೆಯ ನೆರಳನ್ನು ಗಮನಿಸಿ ಕಲ್ಯಾಣಿ ತಟ್ಟನೆ ಹೇಳಿದಳು.

"ಬರ್ತೀನಿ ಬೇಕಾದರೆ–ಕಾಫಿ ತಿಂಡಿ ತಗೊಂಡು."

"ಬೇಡ ಆಯಾಸ ಮಾಡಿಕೊಳ್ಳಬೇಡ. ಬೇಕಾದರೆ ಇನ್ನೊಂದು ದಿನ ಹೋಗೋಣ."

ಆದರೆ ಇನ್ನೊಂದು ದಿನ ಬರಲೇ ಇಲ್ಲ.

ಒಂದೇ ಮನೆಯ ನೆರಳಿನಲ್ಲಿ ವಾಸಮಾಡುತ್ತಿದ್ದ ಗಂಡ, ಹೆಂಡಿರ ಭೇಟಿ ದಿನದಿನಕ್ಕೆ ಕಮ್ಮಿಯಾಗುತ್ತಾ ಬಂತು.

ಬೆಳಿಗ್ಗೆ ರಾಮನಾಥ ಎದ್ದಾಗ ಅವನ ಸ್ನಾನ, ಚೌರ ಅವನಿಗೆ. ಅಂದಿನ ಪಾಠಕ್ಕೆ ತಕ್ಕ ಸಿದ್ಧತೆ ಅವಳಿಗೆ. ಬಸ್ಸೆಲ್ಲಿ ತಪ್ಪಿಹೋಗುವುದೋ ಎಂಬ ಆತುರದಿಂದ ರಾಮನಾಥ ಕಾಫಿ, ತಿಂಡಿ ತಿಂದು ಓಡಿಹೋಗುತ್ತಿದ್ದ. ಅನೇಕ ದಿನ ಬೆಳಗಿನ ಹೊತ್ತು ಕಲ್ಯಾಣಿಯ ಮುಖದರ್ಶನವೇ ಅವನಿಗಿರುತ್ತಿರಲಿಲ್ಲ.

ಸಂಜೆ ಅವನು ಬಂದಾಗ ಕಲ್ಯಾಣಿ ಇನ್ನೂ ಸ್ಕೂಲಿನಿಂದ ಬಂದಿರುತ್ತಿರಲಿಲ್ಲ. ಎರಡು ಬಸ್ಸು ಹಿಡಿದು ಅವಳು ಮನೆಗೆ ಬರುವ ವೇಳೆಗೆ ಎಷ್ಟೋ ದಿನ ಸಂಜೆ ಏಳುಗಂಟೆಯ ಮೇಲಾಗಿ ಬಿಡುತ್ತಿತ್ತು. ಅಷ್ಟು ಹೊತ್ತಿಗೆ ರಾಮನಾಥ ಕ್ಲಬ್ಬಿಗೆ ಹೊರಟು ಹೋಗಿರುತ್ತಿದ್ದ.

ಏಳು ಗಂಟೆಗೆ ಮನೆಗೆ ಬಂದ ಕಲ್ಯಾಣಿ ತಿಂಡಿಯನ್ನು ತಿನ್ನದೆ ಒಂದೇ ಬಾರಿಗೆ ರಾತ್ರಿಯೂಟವನ್ನು ಮುಗಿಸಿ ಆಯಾಸದಿಂದ ರೂಮಿಗೆ ಹೋಗಿ ಮಲಗಿಬಿಡುತ್ತಿದ್ದಳು. ರಾಮನಾಥ ಕ್ಲಬ್ಬಿನಿಂದ ಮನೆಗೆ ಬರುವ ವೇಳೆಗೆ ಕಲ್ಯಾಣಿಗೆ ನಿದ್ದೆ.

ನಿದ್ದೆಯಲ್ಲಿದ್ದ ಮಡದಿಯನ್ನು ರಾಮನಾಥ ಎಚ್ಚರಿಸುತ್ತಿರಲಿಲ್ಲ. ಕೆಲವು ದಿನ ಮನಸ್ಸಿಗೆ ತುಂಬಾ ಬೇಜಾರಾದ ದಿನ ಅವಳನ್ನು ಎಬ್ಬಿಸುವ ಆಸೆಯಾಗುತ್ತಿತ್ತು. ಆದರೆ ಅವಳನ್ನು ಎಬ್ಬಿಸಲು ಮುಂದೆ ಬಂದ ಕೈ ಅವಳ ಹೊದಿಕೆಯನ್ನು ಮಾತ್ರ ಸರಿಮಾಡಿ ಸುಮ್ಮನಾಗುತ್ತಿತ್ತು.

ದಾಂಪತ್ಯ ಜೀವನ ಕೊಂಚ ಹಳೆಯದಾದ ಮೇಲೆ ಗಂಡ ಹೆಂಡಿರಲ್ಲಿ ಎಂದಿನ ಸರಸವಾದ ಮಾತುಕತೆ ಕಡಿಮೆಯಾಗಿತ್ತು. ಕಲ್ಯಾಣಿ ಮೊದಲಿ

ನಂತೆ ಬೀದಿಯ ಬಾಗಿಲಿನಲ್ಲಿ ನಿಂತು ಗಂಡನನ್ನು ಎದುರುಗೊಳ್ಳುತ್ತಿದ್ದ ದಿನಗಳೂ ಕಡಿಮೆಯಾಗಿದ್ದವು. ವಾಕಿಂಗು, ಸಿನಿಮಾ, ಗೆಳೆಯರಲ್ಲಿ ಭೇಟಿಗೆ ಹೋಗುವುದು ಎಲ್ಲವೂ ಕಡಿಮೆಯಾಗಿದ್ದವು.

ಆದರೂ ಆಗ ರಾಮನಾಥನಿಗೆ ಈ ಬಗೆಯ ಅಶಾಂತಿಯಿರಲಿಲ್ಲ. ಸರಸವಾದ ಮಾತುಕತೆಯ ಪ್ರವಾಹವಿಲ್ಲದಿದ್ದರೂ ಬೇಕೆಂದಾಗ ಅವಳನ್ನು ರಸಿಕತೆಯ ಕೊಳಕ್ಕೆ ರಾಮನಾಥ ಎಳೆಯಬಲ್ಲವನಾಗಿದ್ದ. ಕಲ್ಯಾಣಿ ಬೀದಿಯ ಬಾಗಿಲಿನಲ್ಲಿ ಬಂದು ತನ್ನನ್ನು ಎದಿರುನೋಡದಿದ್ದರೂ ಮನೆಯ ಒಳಗೆ ತನಗೆ ಅತ್ಯಂತ ಪ್ರಿಯವಾದ ಜೀವವೊಂದು ತನ್ನ ಮನೆಯ ನೆರಳಿನಲ್ಲಿ ಹಾಯಾಗಿದೆ ಎಂಬ ಅಂಶ ಅವನಿಗೆ ತುಂಬಾ ಹಿತಕರವಾಗಿತ್ತು.

ವಾಕಿಂಗು, ಸಿನಿಮಾ ತಾನಾಗಿಯೇ ಬಿಟ್ಟಿದ್ದು; ಬೇಕೆನಿಸಿದ ದಿನ ಅವಳನ್ನು ಹೊರಡಿಸಿ ತಾನೂ ಹೊರಡಬಲ್ಲವನಾಗಿದ್ದ.

ಊಟವಾದ ಮೇಲೆ ಕಲ್ಯಾಣಿ ಒಂದೇ ಸಮನೆ ಹರಟುತ್ತಿದ್ದರೂ ರಾಮನಾಥ ನಿರಾತಂಕವಾಗಿ ಪತ್ರಿಕೆಯನ್ನು ಓದುತ್ತಿದ್ದ. ಅವಳ ಮಾತು ಕೇಳುತ್ತಾ ಪತ್ರಿಕೆಯನ್ನು ಓದುವುದು ಅವನಿಗೆ ಅಭ್ಯಾಸವಾಗಿ ಹೋಗಿತ್ತು. ಪೇಪರೋದುತ್ತಲೇ ಅವನು ಅವಳ ಮಾತಿಗೆ ಹೂಗುಡುತ್ತಿದ್ದ. ಒಮ್ಮೊಮ್ಮೆ ಕಲ್ಯಾಣಿ ರೇಗುತ್ತಿದ್ದಳು.

"ನಾನು ಆಗಿನಿಂದ ಸುಮ್ಮನೆ ಕಂಠ ಶೋಷಣೆ ಮಾಡಿಕೊಳ್ತಿದೀನಿ. ನನ್ನ ಮಾತೊಂದೂ ನಿಮ್ಮ ಕಿವಿಯ ಮೇಲೆ ಬಿದ್ದೇ ಇಲ್ಲ."

"ಒಂದು ಕಿವಿ ನಿನಗೆ ಮೀಸಲಾಗಿಟ್ಟು ಬಿಟ್ಟಿದೀನಿ."

"ಹಾಗಾದರೆ ಈಗ ನಾನೇನು ಹೇಳ್ತಿದ್ದೆ ಹೇಳಿ" ಕಲ್ಯಾಣಿ ಗಂಡನನ್ನು ಪರೀಕ್ಷಿಸುತ್ತಿದ್ದಳು.

"ಶ್ರೀರಂಗಮ್ಮನವರ ಸೊಸೆ ವೇದವಲ್ಲಿ ಕೋಸಂಬರಿಗೆ ಹೆಸರಬೇಳೆಗೆ ಬದಲಾಗಿ ತಿಳಿಯದೆ ಉದ್ದಿನಬೇಳೆ ಹೇಗೆ ನೆನೆಸಿಟ್ಟು ಬಿಟ್ಟಳೂಂತ ಹೇಳ್ತಿದ್ದೆ. ಅಲ್ವಾ?"

"ಹೌದು" ಎಂದು ಪ್ರಸನ್ನಗೊಂಡ ಕಲ್ಯಾಣಿ ತಾನು ಅರ್ಧದಲ್ಲಿಯೇ ನಿಲ್ಲಿಸಿದ್ದ ಬಹು ಮುಖ್ಯವಾದ ವಿಷಯವನ್ನು ಮತ್ತೆ ಮುಂದುವರಿಸುತ್ತಿದ್ದಳು.

"ಪೇಪರೋದುತ್ತಾ ಇದ್ದರೂ ಅದು ಹೇಗ್ರಿ ನೀವು ನನ್ನ ಮಾತನ್ನೆಲ್ಲಾ ಕಿವಿ ಮೇಲೆ ಹಾಕಿಕೊಂಡಿರುತ್ತೀರಿ?" ಕಲ್ಯಾಣಿ ಆಶ್ಚರ್ಯದಿಂದ ಕೇಳುತ್ತಿದ್ದಳು.

"ನೀನೇನು ಒಂದು ಸಲ ಹೇಳಿ ನನ್ನ ಬಿಡ್ತೀಯಾ? ಹಿಡಿದು ನನ್ನ ತಲೆಯೊಳಗೆ ತುರುಕ್ತೀಯಾ ನಿನ್ನ ಮಾತುಗಳನ್ನು."

"ನಾನು ಹೇಳುವುದು ಗೋರ್ಕಲ್ಲ ಮೇಲೆ ಮಳೆಯಲ್ಲ."

"ನಿನ್ನ ಮಾತಿನ ನೀರನ್ನ ಕಲ್ಲೂ ಕುಡಿಯುತ್ತೆ."

ರಾಮನಾಥ ಅಂತಹ ದಿನಗಳನ್ನು ನೆನೆಸಿಕೊಳ್ಳುತ್ತಿದ್ದ. ಕಲ್ಯಾಣಿಯ ಗಲಾಟೆಯಿಲ್ಲದೆ, ಮಾತುಕತೆಯಿಲ್ಲದೆ, ಓದುತ್ತಿದ್ದ ಪೇಪರು ಅವನಿಗೆ ತುಂಬಾ ನೀರಸವಾಗಿರುತ್ತಿತ್ತು. ಓದುತ್ತಿದ್ದ ವಿಷಯಗಳು ಅವನ ತಲೆಗೆ ಹತ್ತುತ್ತಿರಲಿಲ್ಲ.

ಪೇಪರು ಓದುತ್ತಾ ಅವನು ಆಗಾಗ್ಗೆ ನಿದ್ದೆಯ ಲೋಕದಲ್ಲಿ ವಿಹರಿಸುತ್ತಿದ್ದ ಕಲ್ಯಾಣಿಯ ಕಡೆ ಕಣ್ಣು ಹೊರಳಿಸುತ್ತಿದ್ದ.

ಬಯಸಿದ ದಿನ ಅವಳು ಅವನವಳಾಗುತ್ತಿದ್ದಳು. ಆದರೆ ಈಗ ಅವಳ ಆಯಾಸದಿಂದಾಗಿ ರಾಮನಾಥನಿಗೆ ಯಾವುದೂ ಮನಸ್ಸಾಗುತ್ತಿರಲಿಲ್ಲ. ಗಂಡನ ಬಯಕೆಗೆ ಓಗೊಡುವುದು ಹೆಂಡತಿಯಾದ ತನ್ನ ಕರ್ತವ್ಯ ಎನ್ನುವಂತೆ ಕಲ್ಯಾಣಿ ಮೌನವಾಗಿರುತ್ತಿದ್ದಳು.

'ನನ್ನ ಪಾಡಿಗೆ ನನ್ನ ಬಿಟ್ಟರೆ ಸಾಕು' ಎನ್ನುವ ಭಾವ ಅವಳ ಮುಖದ ಮೇಲೆ ತಾನೇ ತಾನಾಗಿರುತ್ತಿತ್ತು. ಆಗ ರಾಮನಾಥನ ಬಯಕೆ ಭಸ್ಮವಾಗಿ ಬಿಡುತ್ತಿತ್ತು.

ಅಷ್ಟೊಂದು ಹಿಂಸೆಯಾದರೂ ಯಾಕೆ?

ದಾಂಪತ್ಯ ಜೀವನದಲ್ಲಿ ಇಬ್ಬರಿಗೂ ಮೊದಲಿನ ಕಾತರ, ಉನ್ಮಾದವಿರಲಿಲ್ಲ. ನಿಜ. ಆದರೂ ಅದರಲ್ಲಿನ ಬೆಡಗು ಸಂಪೂರ್ಣವಾಗಿ ಮಾಸಿರಲಿಲ್ಲ. ಆದರೆ ಈಗಂತೂ ಕಲ್ಯಾಣಿಯ ಬಳಲಿಕೆಯಿಂದಾಗಿ ರಾಮನಾಥನಿಗೆ ಮೊದಲಿನ ಜೀವನ ಗಗನ ಕುಸುಮವಾಗಿತ್ತು.

ಎಲ್ಲವೂ ತನ್ನದಾಗಿದ್ದಾಗ ಅವನಿಗೆ ಅದರ ಬೆಲೆ ತಿಳಿದಿರಲಿಲ್ಲ. ಆದರೆ ಈಗ ತನ್ನ ಮೊದಲಿನ ಸುಖ ಸಂತೋಷಗಳು ದೂರವಾದಾಗ ಅವನಿಗೆ ಅವು

ಗಳ ಬೆಲೆಯ ಅರಿವಾಯಿತು. ಹೆಂಡತಿಯ ನಗು, ಮಾತು, ಕತೆ, ಸರಸ ಇವುಗಳ ಬೆಲೆಯೇನು, ತನ್ನ ಜೀವನದಲ್ಲಿ ಅವುಗಳಿಗಿದ್ದ ಸ್ಥಾನವೇನು ಎಂಬುದನ್ನು ರಾಮನಾಥ ಈಗ ಗ್ರಹಿಸಿದ.

ಅವರಿಬ್ಬರೂ ಒಂದು ಮಾತನ್ನೂ ಆಡದ ದಿನಗಳಿದ್ದವು. ರಾತ್ರಿ ಊಟ ಮಾಡುವಾಗ ಜೊತೆಯಲ್ಲಿರುತ್ತಿದ್ದ ಕಲ್ಯಾಣಿ ಈಗ ಅವನಿಗೆ ಇಲ್ಲ ವಾಗಿದ್ದಳು. ಕಲ್ಯಾಣಿ ಹೆಚ್ಚು ಕಡಿಮೆ ರಾಮನಾಥನಿಗೆ ಅಪರಿಚಿತ ಳಾದಳು.

ವಾರಕ್ಕೊಂದು ದಿನ ಅವರಿಬ್ಬರ ಭೇಟಿಯಾಗುತ್ತಿತ್ತು. ಆಗ ಕಲ್ಯಾಣಿ ಟಿಪ್ಪು, ಮನೆಪಾಠದ ಪುಸ್ತಕಗಳನ್ನು ತಿದ್ದುವುದರಲ್ಲಿ ನಿರತಳಾಗಿ ರುತ್ತಿದ್ದಳು. ಯಾವುದೂ ಇಲ್ಲವೆಂದ ದಿನ ಶಾರದೆ ಬಂದು ಗಂಡ ಹೆಂಡಿರ ನಡುವೆ ಕೂಡುತ್ತಿದ್ದಳು. ಆಗಂತೂ ರಾಮನಾಥನಿಗೆ ಶಾರದೆಯನ್ನು ಚೆನ್ನಾಗಿ ಬೈದು ಕಳುಹಿಸಿ ಬಿಡೋಣವೆನ್ನುವಷ್ಟು ಸಿಟ್ಟು ಬರುತ್ತಿತ್ತು.

ಕಲ್ಯಾಣಿಗೆ ಯಾವಾಗಲೂ ವಿರಾಮವಿದ್ದಾಗ 'ಹೋದರಾಯಿತು,' ಎಂಬ ಧೋರಣೆಯಿತ್ತು ರಾಮನಾಥನಿಗೆ.

ಹೆಂಡತಿ ಅಪರೂಪವಾದ ಮೇಲೆ ರಾಮನಾಥ ಅವಳ ಸಮಯ ಕಾಯುವಂತಾಯಿತು.

ಕಲ್ಯಾಣಿಯೂ ಭಾನುವಾರ ಬರುವುದನ್ನು ಕಾಯುತ್ತಿದ್ದಳು. ಯಾಕೆಂದರೆ ಅದೊಂದು ದಿನ ಸಂಪೂರ್ಣವಾಗಿ ವಿಶ್ರಾಂತಿ ಅನುಭವಿಸ ಬೇಕೆಂಬ ಆಸೆ ಅವಳಿಗೆ.

ರಾಮನಾಥನೇ ಅವಳನ್ನು ಎಲ್ಲಿಗಾದರೂ ಹೋಗೋಣವೆಂದು ಆಹ್ವಾ ನಿಸಿದಾಗ ಕಲ್ಯಾಣಿ ಆಲಸ್ಯದಿಂದ,

'ವಾರವೆಲ್ಲ ಸುತ್ತಿ ಸಾಕಾಗಿದೆ. ಇದೊಂದು ದಿನ ಮನೆಬಿಟ್ಟು ಅಲು ಗಾಡೋದಿಲ್ಲ' ಎಂದುಬಿಡುತ್ತಿದ್ದಳು.

ಒತ್ತಾಯದಿಂದ ಅವಳನ್ನು ಕರೆದೊಯ್ಯುವುದು ರಾಮನಾಥನಿಗೆ ಸಾಧ್ಯವಿತ್ತು. ಆದರೆ ಅದನ್ನು ಅವನ ಮನಸ್ಸು ಒಪ್ಪುತ್ತಿರಲಿಲ್ಲ.

ದಿನ ಹೇಗೆ ಕಳೆಯುವುದೆಂದು ಕಲ್ಯಾಣಿಗೆ ಮೊದಲು ಸಮಸ್ಯೆಯಾ ಗಿತ್ತು. ಈಗ ಅವಳಿಗೆ ಸರಿಯಾಗಿ ಅಲಂಕಾರ ಮಾಡಿಕೊಳ್ಳಲೂ ಸಮಯ

ವಿರಲಿಲ್ಲ. ಕೈಲಿ ಪುಸ್ತಕ ಹಿಡಿದು ಬೆಳಗಿನ ಊಟವನ್ನು ಗಂಟೆಗಟ್ಟಲೆ ಮಾಡುತ್ತಿದ್ದವಳು, ಈಗ ಬಸ್ಸಿಗೆ ಹೊತ್ತಾಗುವುದೆಂಬ ಭಯದಿಂದ ಹಸಿಯೋ, ಬಿಸಿಯೋ ಯಾವುದನ್ನೂ ಲಕ್ಷಿಸದೆ ತಿಂದು ಓಡುತ್ತಿದ್ದಳು.

ಕಷ್ಟ, ಕಾರ್ಪಣ್ಯ, ಅವಸರಗಳನ್ನು ಕಂಡರಿಯದ ಜೀವ ಅವಳದು. ತಾಯಿಯ ಮನೆಯಲ್ಲಿಯೂ ಅಷ್ಟೆ–ಕಲ್ಯಾಣಿ ಎಲ್ಲರಿಗಿಂತಲೂ ಕಿರಿಯವಳಾದುದರಿಂದ ಅನಂತನಿಂದ ಮೊದಲ್ಗೊಂಡು ವಿಜಯಮ್ಮನವರೆಗೆ ಅವಳನ್ನು ಮುದ್ದುಮಾಡಿ ಸಾಕಿದ್ದರು.

ಆನಂದನಿಗಿಲ್ಲದಿದ್ದರೂ ರಾತ್ರಿ ಮಲಗುವಾಗ ಕಲ್ಯಾಣಿಗೆ ಎಂದೂ ಕುಡಿಯಲು ಹಾಲನ್ನು ತಪ್ಪಿಸಿದವರಲ್ಲ. ಹೊತ್ತಿಗೆ ಸರಿಯಾಗಿ ಊಟ, ತಿಂಡಿ, ನಿದ್ದೆಮಾಡಿ ಸುಖಜೀವನಕ್ಕೆ ಅವಳ ಜೀವ ಒಗ್ಗಿತ್ತು. ಒಂದು ದಿನ ಊಟ ಸ್ವಲ್ಪ ತಡವಾದರೂ ಅವಳ ಮುಖ ಬಾಡಿ ಬಸವಳಿದು ಹೋಗುತ್ತಿತ್ತು.

ಸುಖವಾಗಿ ತಿಂದುಂಡು ಹಾಯಾಗಿ ಮನೆಯಲ್ಲಿದ್ದವಳು ಈಗ ಬಿಸಲಿನಲ್ಲಿನ ಅಲೆದಾಟ, ಹೊತ್ತಿಗೆ ಸರಿಯಾಗಿ ಅನ್ನವಿಲ್ಲದೆ ಬಾಡಿ ಸೊರಗಿದ್ದಳು.

ಯಾವಾಗಲೂ ಆಲಸ್ಯ, ನಿತ್ರಾಣ. ಅದರಿಂದಾಗಿ ಅವಳಿಗೆ ಯಾವುದೂ ಬೇಡವಾಗಿತ್ತು. ದಿನ ದಿನಕ್ಕೆ ಕಲ್ಯಾಣಿ ಕೃಶಳಾದುದನ್ನು ಕಂಡು ರಾಮನಾಥ ಒಂದು ಭಾನುವಾರ ಅವಳನ್ನು ಬಲವಂತದಿಂದ ವೈದ್ಯರಲ್ಲಿಗೆ ಎಳೆದುಕೊಂಡು ಹೋದ.

ಡಾಕ್ಟರು ಕಲ್ಯಾಣಿಯನ್ನು ಪರೀಕ್ಷೆಮಾಡಿ ಹೇಳಿದರು.

"ಕೆಲಸ ಜಾಸ್ತಿ. ಪುಷ್ಟಿಯಾದ ಆಹಾರ ಸಾಲದು. ವಿಶ್ರಾಂತಿ ತಗೊಳ್ಳಿ."

ರಾಮನಾಥನಿಗೆ ಕಲ್ಯಾಣಿಯನ್ನು ಎದುರಿಸಲು ಈಗ ಒಂದು ಬಲವಾದ ಅಸ್ತ್ರ ಸಿಕ್ಕಿದಂತಾಯಿತು. ಬಹಳ ದಿನಗಳಿಂದಲೂ ಅವನು ತನ್ನ ಮನಸ್ಸಿನಲ್ಲಿದ್ದ ವಿಷಯವನ್ನು ಅವಳಿಗೆ ಹೇಳಲು ಹಾತೊರೆಯುತ್ತಿದ್ದ. ಆದರೆ ಅದೇಕೋ ಅವನಿಗೆ ಹೇಳುವ ಧೈರ್ಯವಾಗಿರಲಿಲ್ಲ.

ಆ ದಿನ ಡಾಕ್ಟರಲ್ಲಿಂದ ಮನೆಗೆ ಬಂದವನೇ ರಾಮನಾಥ ಕಲ್ಯಾಣಿಯ

ಕೈಲಿ ಮಾತಿಗೆ ಮೊದಲು ಮಾಡಿದ.

"ನಿಂಗೆ ತುಂಬಾ ದಿನದಿಂದ ಒಂದು ವಿಷಯ ಹೇಳಬೇಕೂಂತ ಇದೀನಿ."

"ಹೇಳಿದರಾಯ್ತು. ನಾನೊಂದು ಗಳಿಗೆ ಮಲಗಿಕೊಳ್ತೀನಿ."

"ನಾನು ಹೇಳೋದನ್ನು ಕೇಳಿಬಿಟ್ಟು ಮಲಗಿಕೋ" ಎಂದು ರಾಮನಾಥ ಸ್ವಲ್ಪ ಗದರಿಸಿ ಹೇಳಿದ.

ಕಲ್ಯಾಣಿ ಬಂದು ಅವನ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತು "ಹೇಳೋಣವಾಗಲಿ" ಎಂದಳು.

"ಡಾಕ್ಟರು ಹೇಳಿದ್ದು ಕೇಳಿದೆಯಾ?"

"ಕೇಳಿದೆ".

"ವಿಶ್ರಾಂತಿ ತಗೋಬೇಕೂಂತ ಹೇಳಿದರು."

"ಸರಿ. ಅವರಿಗೆ ಹೇಳೋಕೇನು? ಸಾವಿರ ಹೇಳ್ತಾರೆ."

"ನಿನ್ನ ತಮಾಷೆಗೆ ಅವರ ಹತ್ತಿರ ಕರ್ಕೊಂಡು ಹೋಗಿದ್ದೇಂತ ತಿಳ್ಕೊಂಡೆಯಾ?"

"ನಾನೇನೋ ನಿಮ್ಮ ಜೊತೆ ತಮಾಷೆಗೇ ಬಂದೆ".

"ನಿಜ ಹೇಳು ಕಲ್ಯಾಣಿ. ಈಗ ನಿನ್ನ ಆರೋಗ್ಯ ಮೊದಲಿನ ಹಾಗೆ ಇಲ್ಲ."

"ಸರಿಯಾಗಿದೀನಿ".

"ಹಾಗಾದರೆ ಯಾಕೆ ಎಲ್ಲದರಲ್ಲಿಯೂ ಆಲಸ್ಯ, ಬೇಸರ, ಸೋಮಾರಿತನ...."

"ಎಲ್ಲದರಲ್ಲಿ ಎಂದರೆ?"

"ನಾನು ಹೊರಗೆ ದುಡಿದು ಬಳಲಿ ಮನೆಗೆ ಬರುತ್ತೀನಿ. ನೀನು ನನಗಿಂತ ಹೆಚ್ಚಾಗಿ ಆಯಾಸವಾಗಿ ಬಂದಿರುತ್ತೀಯಾ. ನಮ್ಮಿಬ್ಬರಲ್ಲಿ ಒಬ್ಬರಾದರೂ ಸರಿಯಾಗಿರಬೇಡವೇ? ನಾನು ಸೋತು ಮನೆಗೆ ಬಂದರೆ, ನೀನು ನನಗಿಂತಲೂ ಜೋಲುಮುಖ ಹಾಕಿಕೊಂಡಿದ್ದರೆ ನನಗೆ ಹೇಗೆನಿಸುತ್ತದೆ? ನಾನಂತೂ ಗಂಡಸು. ಹೊರಗೆ ದುಡಿಯಬೇಕು. ಆದರೆ ನಿನಗೆಲ್ಲಿಯ ಹಣೆಬರಹ?"

"ನಿಮಗೆ ನಾನು ಕೆಲಸ ಮಾಡ್ತಿರೋದು ಹೊಟ್ಟೆಉರಿ."

"ಎಳೆ ಮಗುವಿನ ಹಾಗೆ ಮಾತನಾಡಬೇಡ. ಯೋಚನೆ ಮಾಡಿ ಹೇಳು. ಹೆಣ್ಣು ಹೊರಗೆ ದುಡಿದರೆ ನನಗೆ ಅದು ತಪ್ಪಾಗಿ ಕಾಣುವುದಿಲ್ಲ. ಗಂಡು ಸಂಪಾದಿಸಿ ತರುವುದು ಸಾಲದಿದ್ದಾಗ ಹೆಣ್ಣು ಹೊರಗೆ ದುಡಿಯಲಿ. ಆದರೆ ನನಗೆ ಯಾವುದರಲ್ಲಿಯೂ ಕೊರತೆ ಇಲ್ಲದಿರುವಾಗ ಕೇವಲ ನಾಲ್ಕಾರು ಕಾಸುಗಳ ಆಸೆಗಾಗಿ, ಬಟ್ಟೆಗಳ ಮೇಲಿನ ಮೋಹಕ್ಕಾಗಿ ನೀನು ಜೀವ ತೇಯುವುದು ನನಗೆ ಬೇಕಿಲ್ಲ...."

ಕಲ್ಯಾಣಿಗೆ ಗಂಡನ ಮಾತು ಕೇಳಿ ರೇಗಿ ಹೋಯಿತು.

"ಬೇಡವೆ ಹೋದರೆ ನನ್ನ ಬಿಟ್ಟುಬಿಡಿ." ಎಂದಳವಳು. ತಕ್ಷಣ ತಾನು ಹಾಗೆ ದುಡುಕಿ ಮಾತನಾಡಬಾರದಾಗಿತ್ತು ಎನಿಸಿತು ಕಲ್ಯಾಣಿಗೆ.

"ಬಿಡೋಕಲ್ಲ ನಿನ್ನ ಮದುವೆ ಮಾಡಿಕೊಂಡಿದ್ದು."

"ಯಾಕೆ ಮಾಡಿಕೊಂಡಿರಿ ?"

"ಗೊತ್ತಿಲ್ಲವೇ ನಿನಗೆ ಯಾಕೇಂತ ?"

"ನಾನೇನು ನಿಮಗೆ ಯಾವತ್ತೂ ಎದುರಾಡಿಲ್ಲ"

"ನಿಜ. ಮರದ ತುಂಡೂ ಎದಿರಾಡೋದಿಲ್ಲ. ತೀರಾ ನಿರ್ಜೀವ ಳಾಗಿದ್ದೀಯ ನೀನು."

"ಜೀವಂತಳಾಗಿರೋಳನ್ನ ಮದುವೆ ಮಾಡಿಕೊಳ್ಳಿ."

"ಹುಚ್ಚು ಹುಚ್ಚಾಗಿ ಮಾತನಾಡಬೇಡ. ಕನ್ನಡಿಯಲ್ಲಿ ಸ್ವಲ್ಪ ನಿನ್ನ ಮುಖ ನೋಡಿಕೋ ಹೇಗಾಗಿದೇಂತ...."

ಎನ್ನುತ್ತಾ ರಾಮನಾಥ ಎದ್ದು ಹೋಗಿ ಬೀರುವಿನಲ್ಲಿದ್ದ ಕನ್ನಡಿ ಯನ್ನು ತಂದು ಅವಳ ಮುಖಕ್ಕೆ ಹಿಡಿದ.

ಅವಳ ಕಣ್ಣುಗಳು ಹಳ್ಳಕ್ಕಿಳಿದಿದ್ದವು. ಕಣ್ಣುಗಳ ಸುತ್ತ ಕಪ್ಪು ಉಂಗುರವಿತ್ತು. ತುಂಬಿಕೊಂಡಿದ್ದ ಕೆನ್ನೆ ಸೊರಗಿತ್ತು.

"ಏನೋ ಸ್ವಲ್ಪ ಸುತ್ತಾಟದಿಂದ ಹೀಗಾಗಿದೀನಿ."

"ಆ ಸುತ್ತಾಟ ಬೇಡವೆಂದೇ ನಾನು ಹೇಳ್ತಿರೋದು. ಬೆಳಗಿನ ಊಟ ಆತುರದಲ್ಲಿ ಮುಗಿಸುತ್ತೀಯಾಂತ ಅಮ್ಮ ಹೇಳಿದಳು. ರಾತ್ರಿ ಆಯಾಸದಿಂದ ಸರಿಯಾಗಿ ಊಟವಿಲ್ಲ. ನಿನಗೆ ಯಾವ ಕರ್ಮ ಇದು...."

"ನನ್ನ ಕೆಲಸದ ಮೇಲೆ ನಿಮಗೆ ಕಣ್ಣು. ನಾನು ಹಣ ಸಂಪಾದನೆ ಮಾಡುವುದು ನಿಮಗೆ ಬೇಕಿಲ್ಲ."

"ಹೌದು. ನಿನಗೆ ಅಷ್ಟೊಂದು ಹಣದ ಅಗತ್ಯವೇನಿದೆ?"

"ನನ್ನ ಬಟ್ಟೆ, ಬರೆ...."

"ನಾನು ತೆಗೆದುಕೊಡ್ತೀನಿ."

"ಪಾಕೆಟ್ ಮನಿ...."

"ನೀನು ಸಂಪಾದಿಸುವಷ್ಟು ಹಣವನ್ನು ಪಾಕೆಟ್ ಮನಿಯಾಗಿ ನಾನು ಕೊಡದಿದ್ದರೂ ನನ್ನ ಕೈಲಾದಷ್ಟು...."

"ನೀವೇನು ಹೇಳಿದರೂ ನಾನು ಕೆಲಸ ಬಿಡೋದಿಲ್ಲ" ಕಲ್ಯಾಣಿ ಖಂಡಿತವಾಗಿ ಹೇಳಿದಳು. ರಕ್ತದ ರುಚಿ ಕಂಡ ಹುಲಿಯಂತಾಗಿದ್ದಳವಳು—ಹಣದ ರುಚಿ ಕಂಡ ಕಲ್ಯಾಣಿ.

ಹೆಂಡತಿಯ ಹಠ, ಛಲ ಕಂಡು ರಾಮನಾಥನಿಗೂ ರೇಗಿತು.

"ನೀನು ಅಷ್ಟೊಂದು ಹಠಕ್ಕೆ ಬಂದರೆ ನಾನೂ ಹಠ ಮಾಡಬೇಕಾಗುತ್ತದೆ."

"ಏನು ಬೇಕಾದರೂ ಮಾಡಿ. ನಾನಂತೂ ಕೆಲಸ ಬಿಡುವವಳಲ್ಲ."

"ಹಾಗೋ? ನೋಡ್ತೀರು. ಇನ್ನು ಐದು ದಿನ ನಿನಗೆ ಯೋಚನೆ ಮಾಡಲು ಅವಕಾಶ ಕೊಡ್ತೀನಿ. ಆಗಲೂ ನೀನು ಹೀಗೆ ಹಠ ಹಿಡಿದರೆ ಒಂದು ವಾರದಲ್ಲಿ ನಿನ್ನ 'ರಿಲೀವ್' ಮಾಡಿಸುತ್ತೀನಿ."

"ನಿಮ್ಮಿಂದ ಸಾಧ್ಯವಿಲ್ಲ ಅದು."

"ನಮ್ಮ ಸಂಸಾರದ ಸುಖ, ನಿನ್ನ ಆರೋಗ್ಯ ಬಲಿಗೊಟ್ಟಾದರೂ...."

ಕಲ್ಯಾಣಿ ಅವನ ಮಾತು ಮುಗಿಯುವುದಕ್ಕೆ ಮುನ್ನ ಎದ್ದು ನಿಂತು, "ನಂಗೆ ತಲೆ ನೋಯ್ತಿದೆ. ಹೋಗ್ತೀನಿ" ಎಂದಳು.

ರಾಮನಾಥ ತನ್ನೆದುರಿಗೆ ನಿಂತಿದ್ದ ಕಲ್ಯಾಣಿಯನ್ನು ನೋಡಿದ. ಮದುವೆಯಾದ ಮೂರು ವರ್ಷಗಳಲ್ಲಿ ಅವನಿಗೆ ಮೊದಲನೆಯ ಬಾರಿ ಕಲ್ಯಾಣಿಯನ್ನು ಹಿಡಿದು ಚೆನ್ನಾಗಿ ಹೊಡೆಯಬೇಕೆನಿಸಿತು. ಆವೇಶದಿಂದ ರಾಮನಾಥ ಕೈ ಎತ್ತಿದ.

"ಹೆಂಡತಿಯನ್ನು ಹೊಡೆಯುವುದರಲ್ಲಿ ನಿಮ್ಮ ಪೌರುಷ!" ಕಲ್ಯಾಣಿ ಅಣಕವಾಡಿದಳು.

ರಾಮನಾಥ ಎತ್ತಿದ ಕೈ ಇಳಿಸಿ ಹೇಳಿದ.

"ನನ್ನ ಕಣ್ಣೆದುರಿನಿಂದ ತೊಲಗು. ಇಲ್ಲದಿದ್ದರೆ ಏನು ಮಾಡ್ತೀನೋ ಗೊತ್ತಿಲ್ಲ."

ಗಂಡ, ಹೆಂಡಿರಿಬ್ಬರೂ ಪರಮ ವೈರಿಗಳಂತೆ ಒಬ್ಬರನ್ನೊಬ್ಬರು ನೋಡಿದರು. ಮರುಕ್ಷಣವೇ ರೂಮಿನ ಬಾಗಿಲನ್ನು ಧಡಾರನೆ ಹಾಕಿಕೊಂಡು ಕಲ್ಯಾಣಿ ಹೊರಗೆ ಹೋದಳು.

ಗಂಡ, ಹೆಂಡತಿ ಒಬ್ಬರೊಡನೆ ಒಬ್ಬರು ಮಾತನಾಡುವುದನ್ನು ಸಂಪೂರ್ಣವಾಗಿ ಬಿಟ್ಟರು. ಗಂಡ, ಹೆಂಡಿರ ಜಗಳ ಉಂಡು ಮಲಗುವವರೆಗೆ ಎನ್ನುವ ಗಾದೆ ಅವರ ಮಟ್ಟಿಗೆ ಸುಳ್ಳಾಯಿತು.

ಕಲ್ಯಾಣಿ ಉತ್ತರ ದಿಕ್ಕಿಗೆ ತನ್ನ ಹಾಸಿಗೆಯನ್ನು ಎಳೆದುಕೊಂಡಳು. ರಾಮನಾಥ ದಕ್ಷಿಣದ ಒತ್ತಿಗೆ ತನ್ನ ಮಂಚವನ್ನು ಬದಲಾಯಿಸಿದ.

ಅವರಿಗಾದರೂ ತನ್ನನ್ನು ಕೆಲಸದಿಂದ ಬಿಡಿಸುವ ಹಠ ಯಾಕೆ ಎಂದು ಅವಳು ಛಲ ಹಿಡಿದಿದ್ದಳು.

ಗಂಡನಾದ ತನಗೆ, ತನ್ನ ಮಾತಿಗೆ ಹೆಂಡತಿಯಾದವಳು ಗೌರವ ಕೊಡಬೇಡವೇ? ತಾನೆಂದರೆ ಕಾಲಿನ ಕಸವೆಂದು ಭಾವಿಸಿದ್ದಾಳೆ. ಮುಖ್ಯ, ತನ್ನದೇ ತಪ್ಪು. ಮೊದಲಿನಿಂದ ಅವಳಿಗೆ ಅತಿ ಸಲಿಗೆ ಕೊಡಬಾರದಾಗಿತ್ತು. ಈಗ ರೆಕ್ಕೆ ಬಲಿಯಿತು. ಹಾರಲು ಸಿದ್ಧಳಾಗಿದ್ದಾಳೆ. ತನ್ನ ಕೈವಾಡ ತೋರಿಸಿಯೇ ಬಿಡಬೇಕು ಎಂದು ರಾಮನಾಥ ನಿರ್ಧರಿಸಿದ್ದ.

ಶೇಷಯ್ಯನವರು ಗಂಡ, ಹೆಂಡತಿಯ ಜಗಳವನ್ನು ಅಷ್ಟಾಗಿ ಗಮನಿಸಿರಲಿಲ್ಲ. ಆದರೆ ಸಾತಮ್ಮನ ಸೂಕ್ಷ್ಮ ಕಣ್ಣುಗಳಿಗೆ ಎಲ್ಲವೂ ಗೋಚರವಾಗಿತ್ತು. ಕಾರಣವೇನೆಂಬುದು ಆಕೆಗೆ ಸರಿಯಾಗಿ ತಿಳಿಯದಿದ್ದರೂ ಮಗ, ಸೊಸೆ ಜಗಳವಾಡಿದ್ದಾರೆ ಎಂಬುದು ಆಕೆಗೆ ತಿಳಿಯಿತು. ಒಂದೆರಡು ದಿನ ರಾಮನಾಥ 'ಬಹಳ ಸೆಖೆ' ಎಂದು ಹೇಳಿ ವರಾಂಡದಲ್ಲಿ ಮಲಗಿದ್ದ. ಮತ್ತೊಂದು ರಾತ್ರಿ 'ಗೆಳೆಯನ ಮನೆಯಲ್ಲಿ ರಾತ್ರಿ ಊಟವಿದೆ. ಮನೆಗೆ ಬರೋದು ತುಂಬಾ ಹೊತ್ತಾಗಬಹುದು. ಆದುದರಿಂದ ಅಲ್ಲಿಯೇ ಮಲಗುತ್ತೇನೆ' ಎಂದು ಹೇಳಿ ಮನೆಗೆ ಬರಲಿಲ್ಲ.

ಆ ಮಾತನ್ನೂ ಅವನು ಕಲ್ಯಾಣಿಗೆ ಹೇಳಲಿಲ್ಲ. ಅವಳೊಡನೆ

ಮಾತು ನಿಲ್ಲಿಸಿದ್ದರಿಂದ ತಾಯಿಗೆ ಹಾಗೆ ಹೇಳಿ ಹೊರಟುಹೋಗಿದ್ದ. ಆದರೆ ಕಲ್ಯಾಣಿಗೆ ವಿಷಯ ತಿಳಿದಿರಲಿಲ್ಲ.

ಆ ದಿನ ರಾತ್ರಿ ಒಂದು ಹೊತ್ತಿನಲ್ಲಿ ಎಚ್ಚರವಾದಾಗ ಅವಳಿಗೆ ರೂಮಿನಲ್ಲಿ ಹಾಸಿಗೆಯ ಸುರುಳಿ ಮಾತ್ರವಿದುದ್ದು ಕಾಣಿಸಿತು.

ಹಾಗಾದರೆ ಗಂಡ ವರಾಂಡದಲ್ಲಿ ಮಲಗಿಲ್ಲ.

ಕಲ್ಯಾಣಿ ಕಳವಳದಿಂದ ಎದ್ದು ವರಾಂಡದಲ್ಲಿ ನೋಡಿದಳು. ಮನೆಯಲ್ಲಿ ರಾಮನಾಥನಿದ್ದಂತೆ ಕಾಣಲಿಲ್ಲ. ಆಗಲೇ ರಾತ್ರಿ ಎರಡು ಗಂಟೆಯ ಸಮಯವಾಗಿತ್ತು.

ಅವಳ ತಲೆಯಲ್ಲಿ ಕೆಟ್ಟ ಯೋಚನೆಗಳು ಸುಳಿದವು. ದೇಶಾಂತರ.... ಆತ್ಮಹತ್ಯೆ....ವೇಶ್ಯಾಗೃಹ....ಬ್ರಾಂದಿ, ಬೀರ್....ಕಲ್ಯಾಣಿ ನಡುಗಿದಳು.

'ದೇವರೆ, ಅವರು ಸುಖವಾಗಿ ಮನೆಗೆ ಬರಲಿ. ಅವರು ಹೇಳಿದ ಹಾಗೆ ಕೇಳ್ತೀನಿ. ಅವರು ಆತ್ಮಹತ್ಯೆ ಮಾಡಿಕೊಂಡರೆ ನನ್ನ ಗತಿ? ಆಗ ಕೆಲಸವೇನೋ ಉಳಿಯಬಹುದು. ಆದರೆ ರಾಮನಾಥ....ತನ್ನ ಕಂಡರೆ ಎಷ್ಟು ವಿಶ್ವಾಸವಿತ್ತು....'

ಕಲ್ಯಾಣಿ ಹೆದರಿಕೆಯಿಂದ ಅಳತೊಡಗಿದಳು. ಅಳುತ್ತಾ ಸಾತಮ್ಮನ ಬಳಿಗೆ ಹೋಗಿ ಆಕೆಯನ್ನು ಎಬ್ಬಿಸಿದಳು.

"ಏನಾಯ್ತಮ್ಮ?"

"ಇವರು...ಮನೆಗೆ....ಬಂದಿಲ್ಲ....ಎರಡು ಗಂಟೆ...."

"ನಿನಗೆ ಹೇಳಿ ಹೋಗಲಿಲ್ಲವೇ?" ಸಾತಮ್ಮನಿಗೆ ಅಚ್ಚರಿ.

"ಏನನ್ನ?"

"ರಾತ್ರಿ ಮನೆಗೆ ಬರೋದಿಲ್ಲ. ಸ್ನೇಹಿತನ ಮನೇಲಿ ಮಲಗಿಕೊಳ್ತೀನಿ ಎಂದು ಹೇಳಿದ. ನಿನಗೆ ಹೇಳಿ ಹೋಗಲಿಲ್ಲವೇ?"

"ಇಲ್ಲ"

"ಗಾಬರಿಯಾಗಬೇಡ. ಮಲಗಿಕೋ....ನಿನಗೆ ಹೇಳಿ ಹೋಗೋದನ್ನ ಮರೆತುಬಿಟ್ಟಿರಬೇಕು."

ಕಲ್ಯಾಣಿಗೆ ರೋಷ ಬಂತು.

ತನ್ನನ್ನು ಅಷ್ಟು ಗಾಬರಿಗೊಳಿಸಬೇಕೇ ಈ ಗಂಡು ಪ್ರಾಣಿ! ಗಂಡಸ

ರೆಲ್ಲರೂ ಪಶುಗಳು....ಪಶುಗಳು.....ಬ್ರೂಟ್ಸ್....ಹೆಂಡತಿಯನ್ನು ಎಷ್ಟು ಗೋಳಾಡಿಸುತ್ತಾರೆ! ಅಬ್ಬ! ಒಂದು ಗಳಿಗೆಯಲ್ಲಿ ತಾನೆಷ್ಟು ಹೆದರಿ ಹಿಡಿಯಾಗಿ ಹೋಗಿದ್ದಳು!

"ನಾನು ಅವರನ್ನು ದ್ವೇಷಿಸುತ್ತೇನೆ. ಗಂಡಸರು ಪ್ರೀತಿಗೆ ಯೋಗ್ಯರಾದವರಲ್ಲ...."

ಕಲ್ಯಾಣಿ ಕೋಪದಿಂದ ತತ್ತರಿಸುತ್ತಾ ಬಂದು ಹಾಸಿಗೆಯ ಮೇಲೆ ಉರುಳಿಕೊಂಡಳು. ನಿದ್ದೆ ದೂರವಾಯಿತು.

ಬೆಳಿಗ್ಗೆ ಆರು ಗಂಟೆಗೆ ರಾಮನಾಥ ಮನೆಗೆ ಬಂದ. ಅವನ ಶಾಂತವಾದ ಮುಖ ನೋಡಿ, ಕಳೆದ ರಾತ್ರಿಯ ತನ್ನ ಮನದ ಅಳಲನ್ನು ನೆನೆದು ಕಲ್ಯಾಣಿಗೆ ಚೀರಬೇಕೆನಿಸಿತು.

ಕಲ್ಯಾಣಿಯ ಕೆಂಪು ಕಣ್ಣುಗಳನ್ನು ರಾಮನಾಥ ನೋಡಿದ.

ಅನ್ಯಾಯವಾಗಿ ತಾನೂ ಸುಖವಾಗಿರದೆ, ನನ್ನನ್ನೂ ಸುಖವಾಗಿರಿಸದೇ ಇದ್ದಾಳೆ' ಎಂದು ಕೊಂಡ.

ಕ್ಷೌರ ಮಾಡಿಕೊಳ್ಳಲು ಅವನು ರೂಮಿಗೆ ಬಂದಾಗ ಕಲ್ಯಾಣಿ ರೂಮಿನಿಂದ ಹೊರಗೆ ಹೊರಟಳು.

"ಶ್ರೀಮತಿಯವರೇ, ನಾನು ಕೊಟ್ಟ ವಾಯಿದೆ ಇಂದಿಗೆ ತೀರುತ್ತದೆ."

"ನೀವು ನಿಮ್ಮ ಜೀವಮಾನ ಪೂರ್ತಿ ಕಾದರೂ ನಾನು ಕೆಲಸಕ್ಕೆ ರಾಜೀನಾಮೆ ಕೊಡುವುದಿಲ್ಲ."

"ಅವರಾಗಿಯೇ ನಿನ್ನ ಮನೆಗೆ ಕಳಿಸಿದರೋ?" ರಾಮನಾಥ ವ್ಯಂಗ್ಯವಾಗಿ ಕೇಳಿದ.

ಕಲ್ಯಾಣಿ ಉತ್ತರ ಕೊಡವೆ ಹೊರಗೆ ಹೋದಳು.

'ಅದೇನು ಮಾಡ್ತಾರೆ? ನೋಡಿಯೇ ಬಿಡೋಣ' ಎಂದವಳು ತೀರ್ಮಾನಿಸಿದ್ದ ಹಾಗಿತ್ತು.

ಮಾರನೆಯ ದಿನ ರಾಮನಾಥ ಫ್ಯಾಕ್ಟರಿಗೆ ರಜ ತೆಗೆದುಕೊಂಡ ಹಾಗಿತ್ತು. ಬೆಳಿಗ್ಗೆ ಏಳು ಗಂಟೆಯಾದರೂ ಅವನು ಹಾಸಿಗೆಯಿಂದ ಎದ್ದಿರಲಿಲ್ಲ.

ಕಲ್ಯಾಣಿ ಯಾವುದನ್ನೂ ಗಮನಿಸದವಳಂತೆ ತನ್ನ ಕೆಲಸಗಳಲ್ಲಿ

ನಿರತಳಾಗಿದ್ದಳು. ಎಂದಿನಂತೆಯೇ ಆತುರವಾಗಿ ಊಟ ಮುಗಿಸಿ ಓಡಿ ಹೋದಳು.

ರಾಮನಾಥ ಸಾವಕಾಶವಾಗಿ ತನ್ನ ಊಟ ಮುಗಿಸಿ ಹೊರಟ. ಕಲ್ಯಾಣಿ ಉಪಾಧ್ಯಾಯಿನಿಯಾಗಿದ್ದ ಹೈಸ್ಕೂಲಿಗೆ ಹೋಗಿ ಜವಾನಿಯ ಕೈಲಿ ಚೀಟಿಯೊಂದನ್ನು ಬರೆದು ಕಳುಹಿಸಿ ಉತ್ತರಕ್ಕಾಗಿ ಕಾದು ನಿಂತ. ಐದು ನಿಮಿಷಗಳಲ್ಲಿ ಒಳಗೆ ಬರಲು ಕರೆ ಬಂತು.

ಹೆಡ್‌ಮಿಸ್ಟ್ರೆಸ್ ಮಾಣಿಕ್ಯಮ್ಮನ ರೂಮಿಗೆ ಹೋಗಿ ರಾಮನಾಥ ನಮಸ್ಕಾರ ಮಾಡಿದ.

"ತಾವು ಯಾರು ಅಂತ ತಿಳಿಯಲಿಲ್ಲ"

"ನಿಮ್ಮ ಸ್ಕೂಲಿನಲ್ಲಿ ಕಲ್ಯಾಣಿ ಅಂತ ಒಬ್ಬರು.........."

"ಹೂಂ....ಹೂಂ...."

"ಆಕೆ ನನ್ನ ಹೆಂಡತಿ"

"ಕುಳಿತುಕೊಳ್ಳಿ" ಎನ್ನುತ್ತಾ ಆಕೆ ಕುರ್ಚಿಯ ಕಡೆ ಕೈ ತೋರಿಸಿದಳು.

ನರೆತ ತಲೆಗೂದಲು, ಜೀವನದ ಸಾರವನ್ನು ಹೀರಿ ಸುಕ್ಕಾಗಿದ್ದ ಹಣೆ, ಕನ್ನಡಕದ ಹಿಂದಿದ್ದ ಕರುಣೆಯ ಕಣ್ಣುಗಳನ್ನು ನೋಡಿ ರಾಮನಾಥನಿಗೆ ಮನಸ್ಸು ಬಿಚ್ಚಿ ಮಾತನಾಡಲು ಸಾಧ್ಯವಾಯಿತು.

ಸುಮಾರು ಅರ್ಧ ಗಂಟೆಯ ಕಾಲ ರಾಮನಾಥ ಮಾತನಾಡಿದ. ಆಕೆ ಕಿರುನಗೆಯೊಂದನ್ನು ಬೀರುತ್ತಾ ಮೌನವಾಗಿ ಕುಳಿತಿದ್ದರು. ನಡುವೆ ಯಾವುದೋ ಕೆಲಸಕ್ಕಾಗಿ ನೌಕರನೊಬ್ಬ ಬರಲು

'ಯಾರನ್ನೂ ಒಳಗೆ ಕಳಿಸಬೇಡ' ಎಂದರು.

ಮನ್ಮಥನಂತಹ ಗಂಡ, ವಿದ್ಯಾವಂತ, ಕೈತುಂಬ ಸಂಬಳ ಬರುವ ಉದ್ಯೋಗವಿದೆ–ಕಲ್ಯಾಣಿಗಲ್ಲಿಯ ಗ್ರಹಚಾರ! ಇಂತಹ ಗಂಡನನ್ನು ಪಡೆದೂ ಆಕೆ ಕೇವಲ ನಾಲ್ಕಾರು ಕಾಸಿನ ಸಂಪಾದನೆಗಾಗಿ, ಒಂದೆರಡು ಬಟ್ಟೆಗಳನ್ನು ಕೊಳ್ಳುವ ಆಸೆಯಿಂದ ಯಾಂತ್ರಿಕವಾಗಿ ದುಡಿಯಬೇಕೆ?

ಅದೂ ತನ್ನ ಆರೋಗ್ಯ, ಸುಖ,ಸಂತೋಷ ಬಲಿಗೊಟ್ಟು? ತನಗಂತೂ ದುಡಿಯದೆ ಇರಲು ಸಾಧ್ಯವಿರಲಿಲ್ಲ. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದು

ಕೊಂಡು ಬೇರೆ ಯಾವ ಮಾರ್ಗವೂ ತೋರದೆ ಕೊನೆಗೆ ವಿದ್ಯೆ ಕಲಿತು ಉಪಾಧ್ಯಾಯಿನಿಯಾಗಬೇಕಾಯಿತು.

ಗಂಡನೊಡನೆ ಎರಡು ದಿನ ಸರಿಯಾಗಿ ಬಾಳಲಿಲ್ಲ. ಆತನೊಡನೆ ಅಚ್ಚುಕಟ್ಟಾಗಿ ಬಾಳುವೆ ನಡೆಸಬೇಕೆಂದು ತನಗಾದರೂ ಎಷ್ಟೊಂದು ಆಸೆಯಿತ್ತು!

ಹೊರಗೆ ದುಡಿದು ಬರುವ ಗಂಡ, ಎರಡು ಚಿಕ್ಕಮಕ್ಕಳು, ಒಪ್ಪವಾದ ಸಂಸಾರ—ಎಂತಹ ಕನಸು!

ಆದರೆ ಮಾಣಿಕ್ಯಮ್ಮನ ಪಾಲಿಗದು ಕನಸಾಗಿಯೇ ಉಳಿಯಿತು. ಹದಿನಾರನೆಯ ವಯಸ್ಸಿನಲ್ಲಿ ಆಕೆ ವಿಧವೆಯಾಗಿದ್ದರು. ನೆಂಟರಿಷ್ಟರ ಹಂಗಿನಲ್ಲಿಯೇ ವಿದ್ಯೆ ಮುಗಿಸಿದ್ದರು.

ಈಗ ಆಕೆಯ ಬದುಕು ಶಾಂತವಾಗಿತ್ತು. ಹೂಂ....ಒಂಟಿ ಪಕ್ಷಿ.

ಒಮ್ಮೊಮ್ಮೆ ತಾನು ಹೆಣೆದಿದ್ದ ಕನಸಿನ ಚಿತ್ರ ಸುಳಿದರೆ ಆಕೆಗೆ ಬದುಕು ಭಾರವೆನಿಸುತ್ತಿತ್ತು.

ಮನೆಗೆಲ್ಲಾ ತಾನೊಬ್ಬಳು. ಬಂದರೆ 'ಬಂದೆಯಾ, ತಿಂದೆಯಾ' ಎಂದು ಆದರಿಸುವವರಿಲ್ಲ. ಕೊನೆಗೆ ಸತ್ತ ತನಗಾಗಿ ಕಣ್ಣೀರು ಕರೆಯುವವರೂ ಇಲ್ಲ.

ಕೊನೆಗೆ ಪತಿಯ ನೆನಪಿಗಾಗಿ ಒಂದು ಮಗುವೂ ಇಲ್ಲ. ಬರಡು ಬಾಳು–ಶೂನ್ಯ ಜಗತ್ತು–ಎಲ್ಲೆಲ್ಲೂ ಕತ್ತಲು. ಈಗ ವಿದ್ಯಾರ್ಥಿನಿಯರೇ ಆಕೆಯ ಮಕ್ಕಳು. ಸಹೋದ್ಯೋಗಿಗಳೇ ತಂಗಿಯರು.

ಅವರೆಲ್ಲರಿಗೂ ಆಕೆ ತಾಯಿ-ಅಕ್ಕ.

ಕಣ್ಣಿನಲ್ಲಿ ತುಂಬುತ್ತಿದ್ದ ನೀರನ್ನು ಆಕೆ ಪ್ರಯತ್ನಪೂರ್ವಕವಾಗಿ ನಿವಾರಿಸಿಕೊಂಡು ರಾಮನಾಥನ ಕಡೆಗೊಮ್ಮೆ ನೋಡಿದರು.

ಎಂತಹ ಆಕರ್ಷಣೀಯ ವ್ಯಕ್ತಿ! ಸರಿಯಾದ ಕಾಲಕ್ಕೆ ತನಗೊಬ್ಬ ಮಗನಾಗಿದ್ದಿದ್ದರೆ ಇಷ್ಟು ವಯಸ್ಸಿನ ಮಗನಿರಬಹುದಾಗಿತ್ತು.

ಆತನ ವಿಶಾಲವಾದ ಎದೆಗಿಂತಲೂ ಕಲ್ಯಾಣಿಗೆ ಒರಗಿಕೊಳ್ಳಲು ಬೇರೊಂದು ಸಾಧನ ಬೇಕೆ?

ರಾಮನಾಥ ತನ್ನ ಮಾತನ್ನು ಮುಗಿಸಿದ: "ಮೇಡಂ, ನಾನು ಹೇಳು

ವುದನ್ನೆಲ್ಲಾ ಹೇಳಿದ್ದೇನೆ. ಇದರ ಮೇಲೆ ನಿಮಗೆ ತೋರಿದಂತೆ ಮಾಡ ಬಹುದು."

"ಆಗಲಿ. ನಾನೂ ಯೋಚನೆ ಮಾಡ್ತೀನಿ. ಮುಂದಿನ ವಾರ ಕಮಿಟಿ ಮೀಟಿಂಗಿದೆ. ಕಲ್ಯಾಣಿ ಒಳ್ಳೆಯ ಉಪಾಧ್ಯಾಯಿನಿ. ಆ ದೃಷ್ಟಿ ಯಿಂದ ಅವಳನ್ನು ಕಳೆದುಕೊಳ್ಳಲು ಶಾಲೆ ಯೋಚಿಸುತ್ತದೆ."

"ತಮಗೆ ತುಂಬಾ ತೊಂದರೆ ಕೊಟ್ಟೆ. ಕ್ಷಮಿಸಿ" ಎನ್ನುತ್ತಾ ರಾಮ ನಾಥ ಎದ್ದು ನಿಂತ.

"ತೊಂದರೆ ಏನಿಲ್ಲ. ನೀವು ಸುಖವಾಗಿರೋದು ಮುಖ್ಯ."

"ನಮಸ್ಕಾರ" ಎನ್ನುತ್ತಾ ರಾಮನಾಥ ಕೈಜೋಡಿಸಿ ಹೊರಗೆ ಬಂದ.

ರಾಮನಾಥ ಸಂಜೆ ಕ್ಲಬ್ಬಿಗೂ ಹೋಗದೆ ಮನೆಯಲ್ಲಿಯೇ ಇದ್ದ. ರಾತ್ರಿ ಸುಮಾರು ಎಂಟು ಗಂಟೆಯ ವೇಳೆಗೆ ಕಲ್ಯಾಣಿ ಮನೆಗೆ ಬಂದಳು.

ಗಂಡನ ಕಡೆಗೊಮ್ಮೆ ಉರಿನೋಟ ಬೀರಿ ಒಳಗೆ ಹೋದಳು. "ಯಾಕಮ್ಮ ಇಷ್ಟು ಹೊತ್ತಾಯಿತು ?" ಎಂದರು ಸಾತಮ್ಮ.

"ಏನೋ ಕೆಲಸವಿತ್ತು" ಎಂದಳು ಕಲ್ಯಾಣಿ.

ಆ ಕೆಲಸವೇನೆಂಬುದು ರಾಮನಾಥನಿಗೆ ಮಾತ್ರ ತಿಳಿದಿತ್ತು.

ರಾತ್ರಿ ರೂಮಿನೊಳಗೆ ಬಂದವಳೇ ಕಲ್ಯಾಣಿ ಗಂಡನೊಡನೆ ಬೆಕ್ಕಿ ನಂತೆ ಕಾದಾಡಿದಳು.

"ನಾಚಿಕೆ ಆಗೊಲ್ಲ ? ನಿಮ್ಮ ಕೈಲಿ ನನ್ನ ಬಿಡಿಸೋಕೆ ಆಗದೆ ಅಲ್ಲಿ ಹೋಗಿ ಹೆಡ್‌ಮೇಡಂ ಕಾಲಿಗೆ ಬಿದ್ದು ಕೇಳಿಕೊಂಡಿದೀರ ! ಅವರೇನು ತಿಳ್ಕೋತಾರೆ–ಹೆಂಡತೀನ ಆಳಲಾರದವನೂಂತ...."

"ನಿಂಗ್ಯಾಕೆ ಕೆಲಸ ಕಲ್ಯಾಣಿ ? ನಿಂಗೆ ಮದುವೆಯಾಗಿದೆ. ಉಡಲು, ಉಣ್ಣಲು ಸಾಕಷ್ಟಿದೆ. ಒಂದು ಕೆಲಸ ಸಿಕ್ಕಿದರೆ ಒಪ್ಪೊತ್ತಾದರೂ ಊಟ ಮಾಡ್ತೀವಿ ಅಂತ ಇರೋರು ನಮ್ಮಲ್ಲಿ ಸಾವಿರಾರು ಜನ ಇದಾರೆ. ಅವರ ತುತ್ತು ನೀನು ಕಸಿಯಬೇಡ. ಯಾರಾದರೂ ಬಡ ಹುಡುಗಿಗೆ ನಿನ್ನ ಕೆಲಸ ಬಿಟ್ಟುಕೊಟ್ಟು ಪುಣ್ಯ ಕಟ್ಟಿಕೋ. ಸ್ನೋ, ಪೌಡರ್, ಬಟ್ಟೆಗಳಿಗಿಂತಲೂ ಅನ್ನದ ಅಗತ್ಯ ಮನುಷ್ಯನಿಗೆ ಹೆಚ್ಚು."

"ಜಡ್ಜಿ ಮಗಳು, ಡೆಪ್ಯುಟಿ ಕಮಿಷನರ್ ಮಗಳು ಹೊಟ್ಟೆಗಿಲ್ಲದೆ ಮೇಡಂಗಳಾಗಿದ್ದಾರೇನೋ ? ನಾನು ರಾಜಕುಮಾರಿ ಅಲ್ಲವೇ ?"

"ನನ್ನ ಕೈಲಿ ಆಡಳಿತ ಇದ್ದಿದ್ದರೆ ಅಂತಹವರಿಗೆ ಖಂಡಿತ ಕೆಲಸ ಕೊಡುತ್ತಿರಲಿಲ್ಲ. ನಮ್ಮಲ್ಲಿ ನಡೆಯುತ್ತಿರುವ ಅನ್ಯಾಯ ಒಂದೇ ಎರಡೇ ? ವಜ್ರದ ಒಡವೆಗಳನ್ನು ತೊಟ್ಟು ಧರ್ಮಾವರದ ಸೀರೆ ಉಟ್ಟು ಕಾರಿನಲ್ಲಿ ಬರ್ತಾಳಲ್ಲಾ ಅವಳು—ಡೆಪ್ಯುಟಿ ಕಮೀಷನರ್ ಮಗಳು—ನಾಚಿಕೆ ಆಗೋಲ್ಲ ಅವಳಿಗೆ ? ಬದಲು ಗತಿ ಇಲ್ಲದ ವಿದ್ಯಾವಂತ ಹುಡುಗೀಗೆ ಯಾಕೆ ತನ್ನ ಪ್ರಭಾವದಿಂದ ಕೆಲಸ ಮಾಡಿಸಿಕೊಡಬಾರದು ? ಕೇಸರಿ—ನಿಮ್ಮ ಸಮಾಜಕ್ಕೆ ಬರ್ತಾಳಲ್ಲಾ—ಒಂದು ಹೊತ್ತಿಗೂ ಅನ್ನವಿಲ್ಲ ಮನೆಯವರಿಗೆ—ವಿದ್ಯಾವಂತೆ—ಅವಳಿಗೆ ಆ ಕೆಲಸ ಕೊಡಿಸಬಾರದೇನು ?"

"ಬಡವರನ್ನ ಉದ್ಧಾರ ಮಾಡಿರೋಕೆ ಹೊರಟಿರೋರು ನೀವು."

"ನಾನು ಯಾರನ್ನೂ ಉದ್ಧಾರ ಮಾಡೋದಕ್ಕೆ ಹೊರಟಿಲ್ಲ. ನನ್ನ ಸಂಸಾರ ಚೆನ್ನಾಗಿರಬೇಕೆಂದು ಆಸೆ."

"ನಿಮ್ಮ ಸಂಸಾರ ಏನಾಗಿದೆ ?"

"ನನ್ನ ಸಂಸಾರದಲ್ಲಿ ಈಗ ಏನಿವೆ ? ನಿನಗೆ ಹಾಳು ಕೆಲಸದಿಂದಾಗಿ ಯಾವಾಗಲೂ ಆಲಸ್ಯ, ಆಯಾಸ, ಬಳಲಿಕೆ, ಸುಸ್ತು."

"ನಿಮ್ಮ ಮಾತು ಕೇಳಿ ಮೈಯೆಲ್ಲಾ ಕೆಂಡವಾಗ್ತಿದೆ"

"ನೀನು ಇನ್ನೇನಾದರೂ ಹೇಳುವುದಿದೆಯೇ? ನನಗೆ ನಿದ್ದೆ ಬರ್ತಿದೆ" ಎಂದ ರಾಮನಾಥ ಬೇಸರದಿಂದ.

"ಹೂಂ. ನಾನು ನಿಮ್ಮನ್ನು ದ್ವೇಷಿಸುತ್ತೇನೆ."

"ಈ ಮಾತು ಆಗಲೇ ಬಹಳ ಸಲ ಆಡಿಬಿಟ್ಟಿದೀಯ. ಬೇರೆ ಇನ್ನೇನಾದರೂ ಹೊಸ ಪದ ಹುಡುಕಿ ಹೇಳು" ಎನ್ನುತ್ತಾ ರಾಮನಾಥ ಮಲಗಿಯೇ ಬಿಟ್ಟ.

ಕಲ್ಯಾಣಿ ಮುಸುಕಿನಲ್ಲಿಯೇ ಬಿಕ್ಕಿಬಿಕ್ಕಿ ಅತ್ತಳು. ರಾಮನಾಥ ಯಾವುದಕ್ಕೂ ಕಿವಿಗೊಡದೆ ಶಿಲೆಯಂತೆ ಮಲಗಿದ್ದ.

ಒಂದು ವಾರದಲ್ಲಿ ರಾಮನಾಥನಿಗೆ ಮನೆ ಬೇಸರವಾಯಿತು. ಅವನು ಮನೆಗಿಂತಲೂ ಮನೆಯ ಹೊರಗೆ ಹೆಚ್ಚು ಸಮಯವನ್ನು ಕಳೆಯುತ್ತಿದ್ದ.

ಕಲ್ಯಾಣಿಯಂತೂ ಗಂಡನ ಮುಖ ನೋಡಿದರೆ ಕಿಡಿಕಿಡಿಯಾಗುತ್ತಿದ್ದಳು. ಸಾತಮ್ಮನವರು ಆಡುವುದಕ್ಕಿಲ್ಲದೆ, ಅನುಭವಿಸುವುದಕ್ಕಿಲ್ಲದೆ ಮೂಕಸಂಕಟ ಅನುಭವಿಸುತ್ತಿದ್ದರು.

ಶೇಷಯ್ಯನವರು ಮಾತ್ರ ನಿರಾತಂಕದಿಂದ ಊಟ, ತಿಂಡಿ ಮಾಡಿಕೊಂಡು ಬಾಯಿ ತುಂಬ ಅಕ್ಕರೆಯಿಂದ ಮಗ, ಸೊಸೆಯನ್ನು ಮಾತನಾಡಿಸುತ್ತಾ ಸಂತೋಷ ಚಿತ್ತರಾಗಿ ಕಾಲ ಕಳೆಯುತ್ತಿದ್ದರು. ಎಲ್ಲಿಯವರೆಗೆ ಅವರ ಹಣದ ಚೀಲ, ಬಡ್ಡಿ ವಗೈರೆಗಳು ಸುರಕ್ಷಿತವೋ, ಅಲ್ಲಿಯವರಿಗೆ ಅವರು ಸಂತೋಷದಿಂದ ಇರುತ್ತಿದ್ದರು.

ಅಪರೂಪವಾಗಿ ತವರು ಮನೆಗೆ ಮಕ್ಕಳೊಡನೆ ಬರುತ್ತಿದ್ದ ಹೆಣ್ಣು ಮಕ್ಕಳನ್ನೂ ಕೇವಲ ಬಾಯಿಮಾತಿನಲ್ಲಿಯೇ ತೃಪ್ತಿಪಡಿಸುತ್ತಿದ್ದರು. ಕೊನೆಗೆ ಮೊಮ್ಮಕ್ಕಳ ಕೈಗೆ ಒಂದು ಪೆಪ್ಪರಮೆಂಟು, ಹಣ್ಣನ್ನು ಸಹ ತಂದು ಕೊಟ್ಟು ಕಂಡಿರಲಿಲ್ಲ ಆ ಪ್ರಾಣಿ.

ಒಮ್ಮೆ ಚಿಕ್ಕಮಗಳ ಮಗುವಿಗೆ ತವರು ಮನೆಯಲ್ಲಿಯೇ ಹುಟ್ಟಿದ ಹಬ್ಬವಾಯಿತು. ಶೇಷಯ್ಯನವರು ಬಾಯಿತುಂಬಾ ಜೇನು ಸೋರುವಂತೆ ಅಮ್ಮಾ, ಅಕ್ಕಾ ಎಂದು ಮಗುವನ್ನು ಮುದ್ದು ಮಾಡಿದರೇ ಹೊರತು ವರ್ಷದ ಹಬ್ಬಕ್ಕೆ ಎರಡಾಣೆಯ ಪೆಪ್ಪರಮೆಂಟನ್ನೂ ತರಲಿಲ್ಲ. ಕೊನೆಗೆ ಆ ದಿನ ಮನೆಗೆ ಬಂದಿದ್ದ ಗೆಳೆಯರು ಸಹ ಮಗುವಿಗೆ ತಮ್ಮ ಯೋಗ್ಯತೆಗೆ ತಕ್ಕ ಹಾಗೆ ಉಡುಗೊರೆಗಳನ್ನು ತಂದಿದ್ದರು.

ಗಂಡನ ಜಿಪುಣತನವನ್ನು ಕಂಡು ಸಾತಮ್ಮ ನೊಂದುಕೊಳ್ಳುತ್ತಿದ್ದರು.

"ಹೋಗಲಿ, ಹೆಣ್ಣುಮಕ್ಕಳನ್ನು ತವರುಮನೆಗೆ ಬರಬೇಡಿ. ಅಕ್ಕಿ ಖರ್ಚಾಗುತ್ತದೆ" ಎಂದು ಹೇಳುವುದಿಲ್ಲವಲ್ಲ. ಅಷ್ಟೇ ಸಾಕು ಎಂದು ಅವರು ತೃಪ್ತಿಪಟ್ಟುಕೊಳ್ಳುತ್ತಿದ್ದರು.

ಮಗ, ಸೊಸೆ ಪರಸ್ಪರ ಮುನಿಸಿಕೊಂಡಿದ್ದುದರಿಂದ ಶೇಷಯ್ಯನವರಿಗೆ ಯಾವ ನಷ್ಟವೂ ಇರಲಿಲ್ಲ. ಆದುದರಿಂದ ಅವರು ಎಂದಿನಂತೆಯೇ ಇದ್ದರು.

ಒಂದು ವಾರದ ನಂತರ ಕಲ್ಯಾಣಿಯ ಹೆಸರಿಗೆ ಶಾಲೆಯಿಂದ ಟಪಾಲೊಂದು ಬಂತು. ಅದರಲ್ಲಿ ಆಕೆಯನ್ನು ಕೆಲಸದಿಂದ ರಿಲೀವ್ ಮಾಡಿರು

ವುದಾಗಿತ್ತು.

ಕಲ್ಯಾಣಿ ಅದನ್ನು ನಿರೀಕ್ಷಿಸಿಯೇ ಇದ್ದಳು. ಗಂಡ ಸಂಜೆ ಫ್ಯಾಕ್ಟರಿಯಿಂದ ಬಂದ ಕೂಡಲೆ ಕಲ್ಯಾಣಿ ಶಾಲೆಯಿಂದ ಬಂದಿದ್ದ ಪತ್ರವನ್ನೂ, ಒಂದು ಲೋಟ ಹಾಲನ್ನೂ ತೆಗೆದುಕೊಂಡು ಹೋಗಿ ಗಂಡನ ಕೈಗೆ ಕೊಟ್ಟಳು.

"ಆ ಕಾಗದ ಓದಿ ಹೊಟ್ಟೆ ತುಂಬಾ ಹಾಲು ಕುಡಿಯಿರಿ" ಎಂದು ಅಣಕವಾಡಿದಳು ಕಲ್ಯಾಣಿ.

ರಾಮನಾಥ ಕಾಗದ ಓದಿ ನಿದಾನವಾಗಿ ಹಾಲು ಕುಡಿದು "ಇದ್ದರೆ ಇನ್ನೊಂದು ಲೋಟ ತಗೊಂಡು ಬಾ" ಎಂದ.

"ನಾಳೆಯ ದಿನ ನಾನು ಮೈಸೂರಿಗೆ ಹೋಗ್ತೀನಿ."

"ಅಗತ್ಯವಾಗಿ ಹೋಗು. ಕಾಗದ ಬರೆದು ಹೋದರೆ ವಾಸಿ."

"ಇನ್ನೊಂದು ದಿನವೂ ನಾನಿಲ್ಲಿ ಇರೋದಿಲ್ಲ. ಮೈಸೂರಲ್ಲಿ ಮನೆ ದಾರಿ ನನಗೆ ಗೊತ್ತಿದೆ."

"ಸಂತೋಷ. ಸ್ವಲ್ಪ ದಿವಸ, ನಿನ್ನ ಕಾವು ಇಳಿಯುವವರೆಗೆ ನಾವಿಬ್ಬರೂ ದೂರದೂರ ಇರುವುದೇ ವಾಸಿ."

"ಸ್ವಲ್ಪ ದಿವಸವೇನು? ನಾನು ಇನ್ನು ಇಲ್ಲಿಗೆ ಬರೋದಿಲ್ಲ. ನಮ್ಮ ತಂದೆಗೆ ನಾನೊಬ್ಬಳು ಭಾರವಿಲ್ಲ. ನಾನು ಅಲ್ಲಿಯೇ ಕೆಲಸಕ್ಕೆ ಸೇರಿಕೊಂಡು ನನ್ನ ಅನ್ನ ಸಂಪಾದಿಸುತ್ತೇನೆ."

"ಹೆಂಗಸು ಇಷ್ಟು ಹಠ ಮಾಡಬಾರದು ಕಲ್ಯಾಣಿ. ನೀನು ನನ್ನ ಶತ್ರುವಲ್ಲ...."

"ಶತ್ರುವೇ ನಾನು ನಿಮಗೆ."

"ಬಾಯಿಗೆ ಬಂದ ಹಾಗೆ ಮಾತನಾಡಬೇಡ ಗಂಡ ಎನ್ನುವ ಮರ್ಯಾದೆ ಇರಲಿ ನಿನಗೆ."

"ನನಗೆ ಅವೆಲ್ಲಾ ತಿಳಿಯೋಲ್ಲ. ಇನ್ನು ಮೇಲೆ ನನ್ನ ಪಾಡು ನನಗೆ."

"ನನ್ನ ಸಹನೆಗೂ ಮಿತಿ ಇದೆ. ನೀನು ಇನ್ನೂ ನನ್ನ ರೇಗಿಸಿದರೆ ನಾನು ಮನುಷ್ಯನಲ್ಲ. ಪಶುವಾಗುತ್ತೇನೆ."

"ಪಶು! ಹ....ಈಗ ಮನುಷ್ಯರಾಗಿರೋದು ಅಷ್ಟರಲ್ಲಿಯೇ ಇದೆ."

ರಾಮನಾಥನ ಕಣ್ಣುಗಳು ಕೆಂಪಾದವು. ಅವನು ತಾನು ಪಶುವಾಗಿದ್ದೇನೆ ಎಂಬುದನ್ನು ಅವಳಿಗೆ ಸ್ಥಿರೀಕರಿಸಿದ.

ಅವಳಿಗೆ ಉಳಿದಿದ್ದು ಕಣ್ಣೀರುಗರೆಯುವುದು ಮಾತ್ರ.

ಮಾರನೆಯ ದಿನ ಬೆಳಿಗ್ಗೆ ಕಲ್ಯಾಣಿ ತನ್ನ ಒಂದೆರಡು ಬಟ್ಟೆಗಳನ್ನು ತೆಗೆದುಕೊಂಡು ಮೈಸೂರಿಗೆ ಹೊರಟಳು. ರಾಮನಾಥ ಆಗ ಮನೆಯಲ್ಲಿ ಇರಲಿಲ್ಲ. ಸಾತಮ್ಮ ಸೊಸೆಗೆ ಎಷ್ಟೋ ಬುದ್ಧಿ ಹೇಳಿದರು.

"ಊಹೂಂ ನಾನು ಹೋಗ್ತೀನಿ. ಇಲ್ಲಿರೋದಿಲ್ಲ" ಎಂದು ಹಠ ಹಿಡಿದು ಕಲ್ಯಾಣಿ ಹೊರಟು ನಿಂತಳು.

ಶೇಷಯ್ಯನವರು "ಹೋದರೆ ಹೋಗಲಿ, ಎರಡು ದಿನದಲ್ಲಿ ಮತ್ತೆ ಇಲ್ಲಿಗೆ ಬರ್ತಾಳೆ" ಎಂದರು.

ಸಿಟ್ಟಿನಿಂದ ಕುದಿಯುತ್ತಾ ಕಲ್ಯಾಣಿ ಮೈಸೂರಿಗೆ ಹೊರಟಳು.

ಅವಳನ್ನು ಹಿಂಬಾಲಿಸಿ ರಾಮನಾಥನ ಕಾಗದವೊಂದು ಅನಂತನ ಹೆಸರಿಗೆ ಬಂತು. ರಾಮನಾಥ ಬರೆದಿದ್ದ.

—'ತವರುಮನೆ ಕಲ್ಯಾಣಿಯ ಪಾಲಿಗೆ ಮುಳ್ಳು ಹಾಸಿಗೆಯಾಗಲಿ. ಅವಳು ಮತ್ತೆ ನನ್ನಲ್ಲಿಗೇ ಬರುತ್ತಾಳೆ. ನನ್ನೊಡನೆ ನೀವೆಲ್ಲ ಸಹಕರಿಸುವಿರೆಂದು ಭಾವಿಸಿದ್ದೇನೆ!'

ಕಾಗದ ಪತ್ರವಿಲ್ಲದೆ ಮುಖ ದಪ್ಪಗೆ ಮಾಡಿಕೊಂಡು ಮನೆಗೆ ಬಂದ ಮಗಳನ್ನು ನೋಡಿ ವಿಜಯಮ್ಮ ನೊಂದುಕೊಂಡರು. ಮೈಸೂರಿಗೆ ಬಂದ ರಾತ್ರಿ ತಾಯಿ, ತಂದೆ, ಅಣ್ಣ, ಅತ್ತಿಗೆಯ ಮುಂದೆ ಕಲ್ಯಾಣಿ ತನ್ನ ದುರಂತ ಕತೆಯನ್ನು ಹೇಳಿಕೊಂಡಳು. ಕತೆ ಕಣ್ಣೀರಿನೊಡನೆ ಮುಕ್ತಾಯವಾಯಿತು.

ಕಲ್ಯಾಣಿ ಕತೆ ಮುಗಿಸಿ ಇತರರ ಪ್ರತಿಕ್ರಿಯೆ ತಿಳಿಯಲು ಕುತೂಹಲಗೊಂಡಳು. ತನ್ನ ದುಃಖ ಜೀವನ ಕೇಳಿ ಇತರರೂ ತನ್ನೊಡನೆ ಕಣ್ಣೀರನ್ನು ಹರಿಸಬಹುದು ಎಂದು ಅವಳು ಭಾವಿಸಿದ್ದಳು.

ವೆಂಕಟಾಚಲಯ್ಯನವರು "ಹುಂ....ಮೊದಲಿನಿಂದ ಮುದ್ದು ಮಾಡಿ ಸಾಕಿದ ಫಲ ಇದು. ಮಗುವಾಗಿದ್ದಾಗಿನಿಂದ ನಾವು ಸರಿಯಾಗಿ ಸಾಕಿದ್ದರೆ

ಇವಳು ಹೀಗೇಕೆ ಆಗುತ್ತಿದ್ದಳು?" ಎಂದರು.

ವಿಜಯಮ್ಮನ ಯೋಚನೆ ಮಾತಿಗೆ ಮೀರಿತ್ತು.

ವತ್ಸಲೆ ಅರ್ಥಗರ್ಭಿತವಾಗಿ ಅನಂತನ ಕಡೆಗೊಮ್ಮೆ ನೋಡಿ ಸುಮ್ಮನಾದಳು. ಅನಂತ ಕೋಪದಿಂದ ಹುಬ್ಬುಗಂಟಿಕ್ಕಿ ಹೇಳಿದ,

"ರಾಮನಾಥ ಒಳ್ಳೆಯವರಾಗುವ ಹೊತ್ತಿಗೆ ನಿನ್ನ ಸುಮ್ಮನೆ ಬಿಟ್ಟಿದ್ದಾರೆ. ನಾನಾಗಿದ್ದರೆ ನಿನ್ನ ಮೈಮೂಳೆಯನ್ನೆಲ್ಲಾ ಪುಡಿಮಾಡುತ್ತಿದ್ದೆ."

ಅಣ್ಣನ ಮಾತನ್ನು ಕೇಳಿ ಕಲ್ಯಾಣಿ ಬಿಕ್ಕಿ ಬಿಕ್ಕಿ ಅತ್ತಳು. ಇಷ್ಟು ದೊಡ್ಡ ಪ್ರಪಂಚದಲ್ಲಿ ತನ್ನವರು ಯಾರೂ ಇಲ್ಲವೆಂದು ತಿಳಿದು ಅವಳ ವ್ಯಥೆ ಹೆಚ್ಚಾಯಿತು.

ಕೊನೆಗೆ ಕುಕ್ಕರಹಳ್ಳಿ ಕೆರೆಯೇ ತನಗೆ ಆಶ್ರಯವೇನೋ?

ವಿಜಯಮ್ಮ ತವರಿಗೆ ಬಂದ ಮಗಳನ್ನು ಸಮಾಧಾನ ಮಾಡಿ ಹೇಳಿದರು.

"ಅನಂತನ ಮಾತು ಯಾವಾಗಲೂ ದುಡುಕು. ನಾಲ್ಕು ದಿನ ಹಾಯಾಗಿರು. ಆಮೇಲೆ ಯಾವುದೂ ಯೋಚನೆ ಮಾಡೋಣ."

ಕಲ್ಯಾಣಿ ಸ್ವಲ್ಪ ಸಮಾಧಾನ ಮಾಡಿಕೊಂಡಳು. ತವರು ಮನೆಗೆ ಬಂದ ಸಂತೋಷದಲ್ಲಿ ಅನ್ನ ಎಂದಿಗಿಂತಲೂ ಸ್ವಲ್ಪ ಹೆಚ್ಚಾಗಿಯೇ ಸೇರಿತು.

ಆತ್ಮಹತ್ಯೆಯ ಯೋಚನೆ ಅವಳ ಮನಸ್ಸಿನಲ್ಲಿ ತಾನೇ ತಾನಾಗಿ ಸುಳಿದಾಡುತ್ತಿತ್ತು. ರಾತ್ರಿ ಎಲ್ಲರೂ ಮಲಗಿದ ಮೇಲೆ ಯಾರಿಗೂ ತಿಳಿಯದಂತೆ ಎದ್ದು ಕೆರೆಯಲ್ಲಿ ಮುಳುಗಿ ಪ್ರಾಣ ಬಿಟ್ಟು ತನ್ನ ದುಃಖ ಜೀವನವನ್ನು ಕೊನೆಗಾಣಿಸಬೇಕೆಂದು ಕಲ್ಯಾಣಿ ನಿಶ್ಚಯಿಸಿದ್ದಳು. ಅದನ್ನು ಅವಳು ಕಾರ್ಯರೂಪಕ್ಕೆ ತರಲು ತಕ್ಕ ಯೋಚನೆ ಮಾಡಿದ್ದಳು. ಪಾಪ! ರಾತ್ರಿ ಎಲ್ಲರಿಗಿಂತಲೂ ಮೊದಲು ನಿದ್ದೆ ಬಂದುದು ಅವಳ ತಪ್ಪೇ?

ಗಾಢ ನಿದ್ದೆ ಬಂದುದರಿಂದ ಕಲ್ಯಾಣಿಗೆ ಆತ್ಮಹತ್ಯೆ ಮಾಡಿಕೊಳ್ಳಲು ಬಿಡುವಾಗಲಿಲ್ಲ.

ಮಾರನೆಯ ದಿವಸ ಆತ್ಮಹತ್ಯೆ ಯೋಚನೆ ಅವಳಿಂದ ದೂರವಾಗಿತ್ತು.

ರಾಮನಾಥನ ಕಾಗದ ಓದಿ ಅನಂತನಿಗೆ ತಂಗಿಯ ಮೇಲೆ ಮತ್ತಷ್ಟು ಕೋಪ ಬಂತು. ಕಲ್ಯಾಣಿಯು ಮನೆಯಲ್ಲಿಲ್ಲವೆಂದು ನಿಶ್ಚಯಮಾಡಿಯೇ

ಅವನು ತಾಯಿಯ ಮೇಲೆ ರೇಗಿದ.

"ನಿನ್ನ ಮುದ್ದಿನ ಫಲ. ಅನುಭವಿಸು."

"ಮಕ್ಕಳನ್ನು ಮುದ್ದು ಮಾಡಿದ ಮಾತ್ರಕ್ಕೆ ಗಂಡನನ್ನು ಬಿಟ್ಟು ಬರಬೇಕೂಂತ ನಾನು ಹೇಳಿಕೊಟ್ಟಿದ್ದೆನೇ? ಕಲ್ಯಾಣಿ ನಮಗೆಲ್ಲ ಒಂದು ದೊಡ್ಡ ಸಮಸ್ಯೆಯಾಗಿ ಬಿಟ್ಟಿದ್ದಾಳೆ"

ಎನ್ನುತ್ತಾ ವಿಜಯಮ್ಮ ಕಣ್ಣೀರೊರೆಸಿಕೊಂಡರು.

"ಅವಳಿಗೆ ಬುದ್ಧಿ ಕಲಿಸೋದನ್ನ ನನಗೆ ಬಿಟ್ಟುಬಿಡು" ಎಂದ ಅನಂತ. ಅಷ್ಟರಲ್ಲಿ ಕಲ್ಯಾಣಿಯ ದನಿ ಕೇಳಿಬಂದದ್ದರಿಂದ ತಾಯಿ ಮಗ ಸುಮ್ಮನಾದರು.

ಒಂದು ವಾರ ಕಲ್ಯಾಣಿ ತವರು ಮನೆಯಲ್ಲಿ ಯಾವುದನ್ನೂ ಲಕ್ಷಿಸದೆ ಸುಖವಾಗಿದ್ದಳು. ಆಗಾಗ್ಗೆ ಅವಳನ್ನು ಚಿಂತೆಗೀಡುಮಾಡುತ್ತಿದ್ದವನು ರಾಮನಾಥ. ಅವನ ಹಠ ಅವಳ ಚಿತ್ತವನ್ನು ಕಲಕಿಬಿಟ್ಟಿತ್ತು.

ಒಂದು ವಾರದ ನಂತರ ಕಲ್ಯಾಣಿಗೆ ಮನೆಯವರು ತನ್ನನ್ನು ಮೊದಲಿನಂತೆ ಕಾಣುತ್ತಿಲ್ಲ ಎಂಬ ಸಂದೇಹ ಬಂತು.

ಅದು ಮೊದಲು ಗೋಚರವಾಗಿದ್ದು ವತ್ಸಲೆಯ ವರ್ತನೆಯಿಂದ. ಒಂದು ದಿನ ಆನಂದ, ಕಲ್ಯಾಣಿ ವರಾಂಡದಲ್ಲಿ ಆಟವಾಡುತ್ತಿದ್ದರು. ಅನಂತ ರೂಮಿನಲ್ಲಿ ಮಲಗಿದ್ದ. ಅವರಿಬ್ಬರ ಗದ್ದಲ ಕೇಳಿ ವತ್ಸಲೆ ರೂಮಿನಿಂದ ಸಿಡುಕಿಕೊಂಡು ಹೊರಗೆ ಬಂದ.

"ಬಾರೋ ಆನಂದ, ಸದಾ ಆಟ ಆಟ... ಆಟ. ಭಾನುವಾರ ಒಂದು ಗಳಿಗೆ ಇವರು ನಿದ್ದೆ ಮಾಡಲಿ. ಗದ್ದಲ ಮಾಡುವುದರಲ್ಲಿ ದೊಡ್ಡೋರು, ಚಿಕ್ಕೋರು ಎಲ್ಲಾ ಒಂದೇ ಆಗಿದೀರಿ" ಎಂದವಳೇ ಆನಂದನನ್ನು ಎಳೆದುಕೊಂಡು ಒಳಗೆ ಹೋದಳು.

ಕಲ್ಯಾಣಿಗೆ ಕೆನ್ನೆಗೆ ಹೊಡೆದಂತಾಯಿತು. ಮದುವೆಗೆ ಮುಂಚೆ ಅತ್ತಿಗೆ ಎಂದೂ ಹಾಗೆ ಮಾತನಾಡಿರಲಿಲ್ಲ. ತನ್ನನ್ನು ಕಂಡರೆ ತುಂಬಾ ಪ್ರೀತಿ, ವಿಶ್ವಾಸದಿಂದ ಇರುತ್ತಿದ್ದ ವತ್ಸಲೆ, ವಿಜಯಮ್ಮ ಬೈದರೂ ತನ್ನ ಪಕ್ಷ ವಹಿಸಿ ಮಾತನಾಡುತ್ತಿದ್ದ ವತ್ಸಲೆ, ಈಗ ಹೀಗೆ ವ್ಯಂಗ್ಯವಾಗಿ ಮಾತನಾಡಬೇಕಾದರೆ?

ಮೊದಲು ಅತ್ತಿಗೆ ಹೀಗೆ ಮಾತನಾಡಿದ್ದರೆ ತಾನು ಸುಮ್ಮನಿರುತ್ತಿದ್ದಳೇ? ಚೆನ್ನಾಗಿ ದಬಾಯಿಸಿ ಅವರಿಂದ 'ತಪ್ಪಾಯಿತು' ಎನಿಸಿಬಿಡುತ್ತಿದ್ದಳು.

ಆದರೆ ಈಗ ಹಾಗೆ ದಬಾಯಿಸಲು ಅದೇಕೋ ಅವಳ ನಾಲಿಗೆ ಹಿಂದೆಳೆಯಿತು.

ಹಿಂದೆ ತಾನು ಆ ಮನೆಯವರಲ್ಲಿ ಒಬ್ಬಳು.

ಮದುವೆಯಾದ ನಂತರ ಹೆಣ್ಣು ತವರು ಮನೆಯಲ್ಲಿಯೂ ಅತಿಥಿ, ಪರಕೀಯಳು.

ಕಲ್ಯಾಣಿಗುಂಟಾದ ಒಂದು ಕ್ಷಣದ ನೋವಿನಲ್ಲಿ ಗಂಡನ ಮನೆಯೇ ವಾಸಿ ಎನಿಸಿತು. ಆದರೆ ಗಂಡನ ಛಲ ನೆನೆದು ಮನಸ್ಸು ಮತ್ತೆ ಬಿರುಸಾಯಿತು.

ಹೂಂ......ತವರು ಮನೆಯಲ್ಲಿಯೂ ತಾನಿರುವುದು ಬೇಡ. ಎಲ್ಲಿಯಾದರೂ ಒಂದು ಸರಿಯಾದ ಕೆಲಸ ಸಿಕ್ಕಿದರೆ, ಎಲ್ಲಾದರೂ ರೂಮು ಮಾಡಿಕೊಂಡು, ಅನ್ನಬೇಯಿಸಿ ತಿಂದುಕೊಂಡು ಸ್ವತಂತ್ರವಾಗಿದ್ದರಾಯಿತು. ಯಾರ ಹಂಗೂ ತನಗೆ ಬೇಡ.

ಆದರೂ ಆ ದಿನ ಕಲ್ಯಾಣಿಗೆ ಅತ್ತಿಗೆಯ ಮಾತಿನಿಂದಾಗಿ ಮನಸ್ಸು ಮುದುಡಿಕೊಂಡಿತ್ತು. ಅದರಿಂದಾಗಿ ಅವಳಿಗೆ ಊಟ, ತಿಂಡಿ ಯಾವುದೂ ಸೇರಲಿಲ್ಲ.

ಮಗಳ ಊಟ ನೋಡಿ ವಿಜಯಮ್ಮ ಕೇಳಿದರು.

"ಯಾಕೇ ಊಟ ಮಾಡೋಲ್ಲ?"

"ಯಾಕೋ ಬೇಕಿಲ್ಲಮ್ಮ."

"ಹೇಗೋ ಸೇರಿಸಿಕೊಂಡು ತಿನ್ನಮ್ಮ. ಬಂದಾಗಿನಿಂದಲೂ ಒಂದು ದಿನ ಸಹ ಸರಿಯಾಗಿ ಊಟ ಮಾಡಿಲ್ಲ."

ವಿಜಯಮ್ಮ ಮಗಳಿಗೆ ಉಪಚಾರ ಮಾಡಿದರು.

"ಬಿಡಮ್ಮ ಅವಳಿಗೆಂತಹ ಉಪಚಾರ? ಬೇಕಾದರೆ, ಹಸಿವಾದರೆ, ತಿನ್ನುತ್ತಾಳೆ" ಎಂದ ಅನಂತ ಒರಟಾಗಿ.

ಕಲ್ಯಾಣಿಯ ಹೃದಯದ ಮೇಲೆ ಮತ್ತೊಂದು ಪೆಟ್ಟು. ತನ್ನ

ಪ್ರೀತಿಯ ಅನಂತಣ್ಣ ಹೀಗೆ ಮಾತನಾಡಬಲ್ಲನೆ! ಕಾರಣ ಏನಿರಬಹುದು?

ಬಹುಶಃ ತಾನು ತವರು ಮನೆಯಲ್ಲಿಯೇ ಆಜೀವ ಪರ್ಯಂತ ಉಳಿಯುವವಳೆಂದರಿತು ಅವರೆಲ್ಲ ತನ್ನನ್ನು ಹೀಗೆ ಕಡೆಗಾಣಿಸುತ್ತಿರ ಬೇಕು.

ತನಗೊಂದು ಕೆಲಸ ಸಿಕ್ಕಿಬಿಟ್ಟರೆ?

ಇವರೆಲ್ಲರಿಗೂ ಮೂಗು ಮುರಿದು, ಹಾಯಾಗಿ ತನ್ನದೊಂದು ಗೂಡು ಮಾಡಿಕೊಂಡು ಹೋಗಿಬಿಡಬಹುದು. ಆಗ ಅನಂತ, ವತ್ಸಲೆ ಕಾಲಿಗೆ ಬಿದ್ದು ತನ್ನನ್ನು 'ಅಲ್ಲಿಯೇ ಇರು' ಎಂದು ಕೇಳಿಕೊಂಡರೂ ತಾನೊಂದು ಗಳಿಗೆಯೂ ಅಲ್ಲಿರಬಾರದು.

"ಬೇಡಮ್ಮ, ಹಸಿವಾದರೆ ನಾನೇ ಕೇಳ್ತೀನಿ" ಎಂದಳು ಕಲ್ಯಾಣಿ ಅಳು ತುಂಬಿದ ದನಿಯಿಂದ.

"ನಿನ್ನ ಯಕ್ಷೀಕ ಸಾಕಾಯಿತಮ್ಮ, ಮಾತೆತ್ತಿದರೆ ಅಳು ಬಂದು ಬಿಡುತ್ತದೆ" ಎಂದರು ವೆಂಕಟಾಚಲಯ್ಯ.

ಕಲ್ಯಾಣಿಗೆ ಮುಂದೆ ಅಲ್ಲಿ ಕುಳಿತುಕೊಳ್ಳುವುದು ಸಾಧ್ಯವಾಗಲಿಲ್ಲ. ಅವಳು ಎದ್ದು ಹೋದಳು.

ವಿಜಯಮ್ಮ, ಅನಂತ, ಗಂಡನ ಕಡೆ ತಿರುಗಿ "ತುಂಬಾ ಒರಟಾ ಯಿತು ಮಾತು" ಎಂದರು.

"ನೀನು ಸುಮ್ಮನಿರಮ್ಮ, ನಿನಗೆ ಅವಳ ಮೇಲಿರುವಷ್ಟೇ ಪ್ರೀತಿ ನಮಗೂ ಇದೆ. ದುಡುಕಿ ಬಂದಿದ್ದಾಳೆ. ಅವಳ ತಪ್ಪು ಅವಳಿಗೆ ತಿಳಿಸಿ ಗಂಡ, ಹೆಂಡತಿಯ ಸಂಸಾರ ಒಂದುಗೂಡಲೀಂತಾನೇ ನಾವು ಒರಟಾಗಿ ಮಾತನಾಡೋದು" ಎಂದ ಅನಂತ.

"ಹೇಗಾದರಾಗಲಿ ತುಂಬಾ ಒರಟಾಗಬೇಡಿ". ಎಂದರು ವಿಜ ಯಮ್ಮ.

"ಖಾಹಿಲೆ ವಾಸಿಯಾಗಲೀಂತಾನೆ ಅಲ್ಲವೇ ಕಹಿ ಔಷಧಿ ಕುಡಿ ಸೋದು ರೋಗಿಗಳಿಗೆ?"

ವಿಜಯಮ್ಮ ಮಗನ ಮಾತಿಗೆ ಏನನ್ನೂ ಹೇಳದಾದರು. ಅಂದಿ ನಿಂದ ಅನಂತ ತನ್ನ ಒರಟುತನ ಕಡಿಮೆ ಮಾಡಿದರೂ ಆಗಾಗ್ಗೆ ಕೊಂಕು,

ವ್ಯಂಗ್ಯ, ಕುಹಕವನ್ನು ಮಾತಿನಲ್ಲಿ ಸೇರಿಸಿ ತಂಗಿಯ ಮೇಲೆ ಸೂಕ್ಷ್ಮವಾಗಿ ಪ್ರಯೋಗಿಸುತ್ತಿದ್ದ.

ಮನೆಯವರ ಅನಾದರಣೆ, ತಾತ್ಸಾರವನ್ನು ಗಮನಿಸಿದ್ದ ಕಲ್ಯಾಣಿ ಈಗ ಪ್ರೀತಿಯ ಮಾತಿನಲ್ಲಿಯೂ ತನ್ನದೇ ಆದ ವ್ಯಂಗ್ಯವನ್ನು ಕಾಣುತ್ತಿದ್ದಳು.

ತಾಯಿಯೊಬ್ಬಳ ಹೊರತಾಗಿ ಉಳಿದವರೆಲ್ಲ ಕಲ್ಯಾಣಿಯನ್ನು ಸ್ವಲ್ಪ ಅಲಕ್ಷ್ಯದಿಂದಲೇ ಕಾಣುತ್ತಿದ್ದರು.

ತವರು ಮನೆಗೆ ಬಂದ ಹದಿನೈದು ದಿನಗಳಲ್ಲಿ ಕಲ್ಯಾಣಿಗೆ ಉಸಿರು ಸಿಕ್ಕಿಕೊಂಡಂತಾಯಿತು.

ಅವಳು ಸೂಕ್ಷ್ಮ ಸ್ವಭಾವದ ಹುಡುಗಿ. ಎಂತಹ ಮಾತಿನಲ್ಲಿಯೂ ಎರಡರ್ಥ ಕಾಣುತ್ತಿದ್ದವಳು. ಸಾಲದುದಕ್ಕೆ ಸ್ವಾಭಿಮಾನ ಜೇರೆ. ಅಂತಹ ವಳಿಗೆ ಅಣ್ಣ, ಅತ್ತಿಗೆ, ತಂದೆಯ ಮಾತುಗಳು ಶಲ್ಯದಂತೆ ತೋರುತ್ತಿದ್ದವು.

ಒಮ್ಮೊಮ್ಮೆ ಎಲ್ಲರೊಡನೆಯೂ ಜಗಳವಾಡಿ ಮನೆಯಿಂದ ಹೊರಗೆ ಹೊರಟುಬಿಡಬೇಕೆನಿಸುತ್ತಿತ್ತು ಅವಳಿಗೆ. ಆದರೆ ಹೋಗುವುದಾದರೂ ಎಲ್ಲಿಗೆ?

ಯಾರದಾದರೂ ಮನೆಯಲ್ಲಿ ಮುಸುರೆ ತಿಕ್ಕಿ ವಾರ ಮಾಡಿಕೊಂಡರೋ?

ಮರುಕ್ಷಣ ತನ್ನ ಆಲೋಚನೆ ನೆನೆದು ನಗು ಬಂತು ಅವಳಿಗೆ. ತಾಯಿ, ತಂದೆಯಾಡುವ ಬಿರುಸು ಮಾತನ್ನು ಸಹಿಸದವಳು ಇತರರು ಆಡುವ ಮಾತುಗಳನ್ನು ಕೇಳಿಯಾಳೇ?

'ಸಾಕಪ್ಪಾ ಹೆಣ್ಣು ಜನ್ಮ' ಎಂದು ಕಲ್ಯಾಣಿ ತನ್ನನ್ನು ಸೃಷ್ಟಿಸಿದ ಬ್ರಹ್ಮನ ಮೇಲೆ ರೇಗಿಕೊಂಡಳು.

ಒಮ್ಮೆ ವತ್ಸಲೆಯ ಗೆಳತಿಯೊಬ್ಬಳು ಮನೆಗೆ ಬಂದಿದ್ದಳು. ಮಾತಿನ ನಡುವೆ ಆಕೆ ಕಲ್ಯಾಣಿಯ ಕಡೆ ತಿರುಗಿ

"ಯಾವಾಗ ಬಂದಿರಿ?" ಎಂದಳು.

"ಅವಳೇ? ಅವಳು ಬಂದು ಹದಿನೈದು ದಿನವಾಯಿತು" ಎಂದಳು ವತ್ಸಲೆ ಕಲ್ಯಾಣಿ ಬಂದು ಆಗಲೇ ಯುಗವಾಯಿತು ಎನ್ನುವಂತೆ.

"ಇರ್ತೀರಾ ಇನ್ನೂ ಕೊಂಚ ದಿನ?"

"ಹೂಂ. ಇಲ್ಲೇ ಇರ್ತಾಳೆ" ಎಂದಳು ವತ್ಸಲೆ. ಆಗ ಮಾತ್ರ ಕಲ್ಯಾಣಿಗೆ ಕಸಿವಿಸಿಯಾಯಿತು.

ಹಾಗಾದರೆ ತಾನು ತವರು ಮನೆಗೆ ಭಾರವೇ? ಆ ಗಳಿಗೆಯಲ್ಲಿ ತಾನು ಗಂಡನ ಮನೆಯನ್ನು ಬಿಟ್ಟು ಬಂದು ದುಡುಕಿದೆ ಎನಿಸಿತವಳಿಗೆ.

ರಾತ್ರಿ ಟ್ರೈನಿಗೆ ಹೊರಟು ಬಿಟ್ಟರೆ ಹೇಗೆ? ಆದರೆ....ಆದರೆ....ಗಂಡನ ಹಠ?

ತನ್ನವರು ಯಾರೂ ಇಲ್ಲ. ತನ್ನ ಪಾಲಿಗೆ ಜಗತ್ತೆಲ್ಲ ಶೂನ್ಯ. ಅತ್ತಿಗೆ, ಅಣ್ಣ, ತಂದೆಯ ಮಾತುಗಳನ್ನು ಕೇಳಿದಾಗ ಅವಳಿಗೆ 'ಯಾಕಾದರೂ ಇಲ್ಲಿಗೆ ಬಂದೆನೋ' ಎನಿಸುತ್ತಿತ್ತು.

ಸುಮ್ಮನಿರುವುದರ ಹೊರತು ಬೇರೆ ದಾರಿಯೇ ಅವಳಿಗಿರಲಿಲ್ಲ.

* * *

ರಾಮನಾಥ ಫ್ಯಾಕ್ಟರಿಯಿಂದ ಮನೆಗೆ ಬರುವ ಹೊತ್ತಿಗೆ ಕಲ್ಯಾಣಿ ಹೊರಟು ಹೋಗಿದ್ದಳು.

ರಾಮನಾಥನಿಗೆ ಮನೆ ಶೂನ್ಯವಾಗಿದ್ದಂತೆ ತೋರಿತು.

ತಾನಾದರೂ ಅಷ್ಟು ಹಠ ಹಿಡಿಯಬಾರದಾಗಿತ್ತು. ಏನೋ ಹುಡುಗಿ, ಎರಡು ದಿನ ಕೆಲಸ ಮಾಡಿದ್ದರೆ ತನ್ನ ಗಂಟೇನು ಹೋಗುತ್ತಿತ್ತು. ಅವಳಿಗಾದರೂ ಎಷ್ಟು ಹಠ? ತನ್ನ ಮಾತಿಗೆ ಗೌರವ ಬೇಡವೇ?

ರೂಮಿನಲ್ಲಿ ಕಲ್ಯಾಣಿಯ ಬಟ್ಟೆಗಳಿದ್ದವು. ಅವುಗಳನ್ನು ನೋಡಿ ರಾಮನಾಥನಿಗೆ ನಗುಬಂತು.

ಇನ್ನು ಗಂಡನ ಮನೆಗೆ ಬರುವುದಿಲ್ಲವೆಂದು ಹೇಳಿ ಹೊರಟ ಹೆಣ್ಣು. ತನ್ನೆಲ್ಲಾ ಬಟ್ಟೆಗಳನ್ನೂ ತೆಗೆದುಕೊಂಡು ಹೋಗಬಹುದಿತ್ತು.

ಎಲ್ಲಾ ನಾಲಿಗೆಯ ತುದಿಯ ಮಾತು. ಅಂತರಾಳದಿಂದ ಹರಿದು ಬಂದ ನಿರ್ಧಾರವಲ್ಲ ಅವಳದು.

ಎರಡು ದಿನ ರಾಮನಾಥ ಸಂತೋಷವಾಗಿ ಕಾಲ ಕಳೆದ. ಸಿಡುಕು ಮಾತು, ಅಸಮಾಧಾನದ ಮುಖ, ಬಿರುಸು ವರ್ತನೆ ಇವುಗಳು ಕಲ್ಯಾಣಿಯೊಡನೆಯೇ ಮಾಯವಾಗಿದ್ದುದರಿಂದ ರಾಮನಾಥ ಹಾಯಾಗಿದ್ದ.

ನಂತರ ಅವನಿಗೆ ಬೇಸರವಾಯಿತು.

ರೂಮಿನಲ್ಲಿ ಕಲ್ಯಾಣಿಯ ಬಟ್ಟೆಬರೆಗಳ ಹರದವಿಲ್ಲ. ರೂಮಿನೊಳಗೆ ಕಾಲಿಡುತ್ತಿದ್ದ ಹಾಗೇ ಗಮ್ಮೆಂದು ಬರುತ್ತಿದ್ದ ಸ್ನೋ, ಪೌಡರು, ಸೆಂಟಿನ ಪರಿಮಳವಿಲ್ಲ, ಹೂವಿನ ಸುಗಂಧವಿಲ್ಲ. ಆಗಾಗ್ಗೆ ಅವನ ಕ್ಷೌರದ ಪೆಟ್ಟಿಗೆಯಲ್ಲಿ ಹೇಗೋ ಬಂದು ಸೇರುತ್ತಿದ್ದ ಕ್ಲಿಪ್ಪು, ಹೇರುಪಿನ್ನುಗಳ ಹಾವಳಿಯಿಲ್ಲ. ಅವನ ಷರಾಯಿಯ ಜೇಬಿನಲ್ಲೂ ಆಶ್ರಯ ಪಡೆಯುತ್ತಿದ್ದ ರಂಗುರಂಗಿನ ರಿಬ್ಬನ್ನುಗಳ ದಾಂಧಲೆಯಿಲ್ಲ. ನಿದ್ದೆಮಾಡುತ್ತಿದ್ದ ತನ್ನನ್ನು ಅರ್ಧ ರಾತ್ರಿಯಲ್ಲಿ ಎಬ್ಬಿಸಿ,

"ಏನ್ರೀ....ಏನ್ರೀ....ನಿದ್ದೆ ಬಂತಾ?" ಎಂದು ಹಲವಾರು ಸಲ ಕೂಗಿ ಎಬ್ಬಿಸುತ್ತಿದ್ದ ದನಿಯಿಲ್ಲ.

'ಹುಂ....ಹೋದರೆ ಹೋದಳು. ಈಗ ಹಾಯಾಗಿದೀನಿ' ಎಂದು ರಾಮನಾಥ ಕೆಲವು ಸಲ ಹೇಳಿಕೊಂಡರೂ ಮನಸ್ಸಿನಾಳದಲ್ಲಿ ಒಂದು ಕೀಟ ಕೊರೆಯುತ್ತಲೇ ಇತ್ತು.

'ದುಡುಕಿದೆ. ನೀನೂ ದುಡುಕಿದೆ. ಇಬ್ಬರೂ ತಾಳ್ಮೆಯಿಂದಿರಬೇಕಾಗಿತ್ತು".

ಕಲ್ಯಾಣಿಗೆ ಕಾಗದ ಬರೆಯುವ ಮನಸ್ಸಾಯಿತು ರಾಮನಾಥನಿಗೆ. ಅಷ್ಟೊಂದು ಜಂಭಮಾಡಿಕೊಂಡು ಹೋಗಿದಾಳೆ. ಅವಳೇ ಬರೆಯಲಿ ಎಂದು ಮತ್ತೆ ಸುಮ್ಮನಾದ.

ಊರಿಗೆ ಹೋದ ಕಲ್ಯಾಣಿ ಗಂಡನಿಗೆ ಕಾಗದ ಬರೆಯಲಿಲ್ಲ-ಬದಲು ಅನಂತ ರಾಮನಾಥನ ಕಾಗದಕ್ಕೆ ಉತ್ತರ ಬರೆದಿದ್ದ.

"ನಾವೂ ಸಾಧ್ಯವಾದಷ್ಟು ಅವಳನ್ನು ತಿದ್ದಲು ಪ್ರಯತ್ನಿಸುತ್ತಿದ್ದೇವೆ. ನೀವೇನೂ ಯೋಚಿಸಬೇಡಿ. ಎಲ್ಲಾ ಸರಿಹೋಗುತ್ತದೆ."

ಭಾವಮೈದುನನ ಕಾಗದ ಓದಿ ರಾಮನಾಥನಿಗೆ ಎಷ್ಟೋ ಸಮಾಧಾನವಾಯಿತು.

'ಆದರೂ ಇಬ್ಬರೂ ದುಡುಕಿದೆವು. ನಮ್ಮಿಬ್ಬರಲ್ಲಿ ಯಾರೊಬ್ಬರಾದರೂ ಸೋಲಬೇಕಾಗಿತ್ತು' ಎಂದು ರಾಮನಾಥ ಆಗಾಗ್ಗೆ ಪೇಚಾಡಿಕೊಳ್ಳುತ್ತಿದ್ದ.

ಸಾತಮ್ಮನಂತೂ ಸೊಸೆಯ ವರ್ತನೆಯಿಂದ ಭೂಮಿಗಿಳಿದು ಹೋಗಿ

ದ್ದರು.

ಕಲ್ಯಾಣಿ ಗಂಡನ ಮಾತನ್ನು ಅಷ್ಟೊಂದು ಪ್ರತಿಭಟಿಸುವಳೆಂದು ಅವರು ಕನಸು ಮನಸ್ಸಿನಲ್ಲಿಯೂ ಎಣಿಸಿರಲಿಲ್ಲ.

ಗಂಡನ ಮಾತನ್ನು ಹೆಂಡತಿಯಾದವಳು ವಿರೋಧಿಸುವುದು ಅವರ ದೃಷ್ಟಿಯಲ್ಲಿ ಅಕ್ಷಮ್ಯ ಅಪರಾಧವಾಗಿತ್ತು.

ಇನ್ನು ಗಂಡನನ್ನು ಬಿಟ್ಟುಹೋಗುವುದು....ಅದನ್ನು ಬಾಯಿಂದ ನುಡಿದರೇ ರೌರವಾದಿ ನರಕ!

ಆಕೆ ಸಮಯ ಸಿಕ್ಕಿದಾಗಲೆಲ್ಲಾ ಮಗನಿಗೆ ಹೇಳುತ್ತಿದ್ದರು "ಹೋಗೋ, ನೀನು ಸೋತರೂ ಚಿಂತೆಯಿಲ್ಲ. ಕಲ್ಯಾಣೀನ ಸಮಾಧಾನ ಮಾಡಿ ಕರೆದು ಕೊಂಡು ಬಾ. ನೋಡಿದವರು ನಮ್ಮ ಸಂಸಾರ ನೋಡಿ ನಗುವ ಹಾಗಾಯಿತು!'

ತಮ್ಮ ಮಾತಿಗೆ ಬಲ ಕೊಡಲು ಆಕೆ ಮಗನೆದುರಿಗೆ ಕಂಬನಿ ಮಿಡಿಯುತ್ತಿದ್ದರು.

ತಾಯಿಯ ಕಣ್ಣೀರು ಕಂಡು ರಾಮನಾಥ ಮರುಗುತ್ತಿದ್ದ. ಆದರೆ ತಾನಾಗಿಯೇ ಸೋತು ಕಲ್ಯಾಣಿಯನ್ನು ಕರೆದುಕೊಂಡು ಬರಲು ಅಭಿಮಾನ ಒಪ್ಪುತ್ತಿರಲಿಲ್ಲ.

"ನಾನು ಅವಳನ್ನು ಕಳಿಸಲೂ ಇಲ್ಲ. ನಾನು 'ಬಾ' ಎಂದು ಹೋಗಿ ಕರೆಯುವುದೂ ಇಲ್ಲ" ಎನ್ನುತ್ತಿದ್ದ ರಾಮನಾಥ.

"ಎಷ್ಟೇ ಆಗಲಿ ನಿಂಗಿಂತ ಚಿಕ್ಕವಳು ಕಣೋ. ಸಾಲದ್ದಕ್ಕೆ ಕಿರಿ ಮಗಳೂಂತ ಸ್ವಲ್ಪ ಮುದ್ದು ಮಾಡಿದಾರೆ ಮನೇಲಿ. ಅದರಿಂದ ಹಠ ಜಾಸ್ತಿ."

"ಚಿಕ್ಕವಳಾದರೆ ದೊಡ್ಡವರು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರ ಬೇಕು. ಒಬ್ಬನೇ ಮಗಾಂತ ನೀವೂ ನನ್ನ ಮುದ್ದುಮಾಡಿ ಸ್ವಲ್ಪ ಹಠ ಕಲಿಸಿದೀರಿ. ಅವಳಿಗಿಂತ ನಾನೇನೂ ಕಡಿಮೆಯಿಲ್ಲ."

"ಹೀಗಾದರೆ ಹೇಗೋ ಮಗೂ, ಸಂಸಾರಾಂದ ಮೇಲೆ ಗಂಡ ಹೆಂಡತಿ ಒಬ್ಬರಿಗೊಬ್ಬರು ತಗ್ಗಿ ಬಗ್ಗಿ ನಡೆಯಬೇಕು. ನಾನು ನಿಮ್ಮಪ್ಪನಿಗೆ ತಗ್ಗಿ ನಡೆಯುತ್ತಿರುವುದರಿಂದಲೇ ನನ್ನದೂ ಒಂದು ಸಂಸಾರವಾಗಿದೆ. ಅವರು

ಜಿಪುಣತನ ನೋಡಿ ನನಗೂ ಎಷ್ಟು ಬೇಜಾರಾಗಿದೇಂದ್ರೆ ಒಂದೊಂದು ಸಲ ಎಲ್ಲಾದರೂ ಹೊರಟು ಹೋಗೋಣಾಂತ ಎನಿಸುತ್ತೆ. ನನ್ನ ಕಾಲ ಹೀಗೇ ಕಳೀತು. ನೀವಾದ್ರೂ ಸುಖವಾಗಿರಿ."

"ನಾನೀಗ ಸುಖವಾಗೇ ಇದ್ದೀನಿ."

"ಅದೆಲ್ಲಾ ಬರಿಯ ಬೂಟಾಟಿಕೆ. ಮೊದಲಿನ ಹಾಗೆ ಊಟ, ತಿಂಡಿ, ನಿದ್ದೆ ಯಾವುದೂ ಮಾಡೋಲ್ಲ? "

"ಸರಿ, ನಿನ್ನ ದೃಷ್ಟಿಯಲ್ಲಿ ನಾನು ಯಾವತ್ತೂ ಊಟ, ತಿಂಡಿ ಸರಿಯಾಗಿ ಮಾಡಿದವನಲ್ಲ" ಎನ್ನುತ್ತಿದ್ದ ರಾಮನಾಥ.

ಶೇಷಯ್ಯನವರು ಮಾತ್ರ ಸೊಸೆ ಹೊರಟು ಹೋಗಿದ್ದಕ್ಕೆ ಒಂದು ಮಾತೂ ಆಡಿರಲಿಲ್ಲ.

ಎರಡು ಸೇರು ಹುರಳಿಕಾಯಿ ತೆಗೆದುಕೊಳ್ಳುವ ಕಡೆ ಅರ್ಧಸೇರು ಕಡಿಮೆ ಕೊಳ್ಳುತ್ತಿದ್ದರು. ಸೊಸೆ ಹೋದ ಮೇಲೆ ಹಾಲೂ ಅರ್ಧ ಪಾವಿನಷ್ಟು ಕಡಿಮೆಯಾಗಿತ್ತು.

ಅದೇನು ಸ್ವಲ್ಪ ಸಂತೋಷದ ವಿಷಯವೇ? ಎಷ್ಟೊಂದು ಹಣ ಉಳಿತಾಯವಾದ ಹಾಗಾಯಿತು!

ಕಲ್ಯಾಣಿ ಗಂಡನನ್ನು ಬಿಟ್ಟು ತವರು ಮನೆಗೆ ಹೋದ ಒಂದೂವರೆ ತಿಂಗಳಿಗೆ ಅನಂತನಿಂದ ಮತ್ತೊಂದು ಕಾಗದ ಬಂತು.

"ಕಲ್ಯಾಣಿಗೆ ಯಾಕೋ ಆರೋಗ್ಯ ಚೆನ್ನಾಗಿಲ್ಲ...."

ರಾಮನಾಥನಿಗೆ ಕೂಡಲೇ ಧಾವಿಸಿ ಹೋಗಿ ಹೆಂಡತಿಯನ್ನು ನೋಡಿ ಬರಬೇಕೆನಿಸಿತು. ಆದರೆ ಅವನು ತನ್ನ ಆಸೆಯನ್ನು ಹುದುಗಿಸಿ ಮೇಲೆ ನಿಶ್ಚಿಂತನಾಗಿದ್ದ. ಆದರೂ ಮನಸ್ಸು ಕೊರೆಯುತ್ತಲೇ ಇತ್ತು.

'ಕಲ್ಯಾಣಿಗೆ ಏನಾಗಿರಬಹುದು? ಅವಳ ಜಂಭದಿಂದಾಗಿ ನನಗೆ ಹೋಗಿ ನೋಡೋಕೆ ಸಾಧ್ಯವಿಲ್ಲ. ಏನಾದರಾಗಲಿ ನಾನೇ ಸೋತು ಹೋಗಿ ಕರೆದುಕೊಂಡು ಬಂದುಬಿಡಲೇ? ಊಹೂಂ-ಸಾಧ್ಯವಿಲ್ಲ. ಅವಳ ಹೆಮ್ಮೆಗೆ ತಕ್ಕ ಶಾಸ್ತಿಯಾಗಬೇಕು.'

ರಾಮನಾಥ ಮೈಸೂರಿಗೆ ಹೊರಡಲಿಲ್ಲ.

ಒಂದು ವಾರದ ನಂತರ ರಾಮನಾಥನಿಗೆ ಅನಂತನಿಂದ ಮತ್ತೊಂದು

ಕಾಗದ ಬಂತು. ಅದರಲ್ಲಿಯೂ ಅವನು ಕಲ್ಯಾಣಿಯ ಆರೋಗ್ಯ ಚೆನ್ನಾಗಿಲ್ಲವೆಂದು ಬರೆದಿದ್ದ.

ಹುಂ....ಅವನಾದರೂ ಬಾಯಿಮಾತಿಗಾದರೂ ಕಲ್ಯಾಣಿಯನ್ನೊಮ್ಮೆ ನೋಡಿಕೊಂಡು ಹೋಗಿ ಎಂದು ಬರೆಯಬಾರದಾಗಿತ್ತೇ? ಹಾಗಾದರೂ ಬರೆದಿದ್ದರೆ ಆಗ ತಾನು ನಾಚಿಕೆಯನ್ನಾದರೂ ತೊರೆದು ಹೋಗಿ ಅವಳನ್ನು ನೋಡಿಕೊಂಡು ಬರಬಹುದಾಗಿತ್ತು.

ರಾಮನಾಥ ಕಷ್ಟಪಟ್ಟು ಮನಸ್ಸನ್ನು ಬಿಗಿಹಿಡಿದ.

ನಾಲ್ಕೈದು ದಿನಗಳ ನಂತರ ಮತ್ತೆ ರಾಮನಾಥನಿಗೆ ಕಾಗದಬಂತು. ಅದರಲ್ಲಿ ಕಲ್ಯಾಣಿ ಹಾಸಿಗೆ ಹಿಡಿದು ಮಲಗಿರುವುದಾಗಿ ಅನಂತ ತಿಳಿಸಿದ್ದ. ಅಷ್ಟಾದರೂ ಆಕೆ ರಾಮನಾಥನ ಹೆಸರನ್ನೇ ಎತ್ತಿರಲಿಲ್ಲವಂತೆ. ಆತನನ್ನು ಕರೆಸೋಣವೇ ಎಂದುದಕ್ಕೆ ಉತ್ತರವನ್ನೇ ಕೊಡಲಿಲ್ಲ ಎಂದು ಅನಂತ ಬರೆದಿದ್ದ.

ಅವಳು ಅಷ್ಟೊಂದು ಬಿಗಿಯ ಮೇಲಿರುವಾಗ ತಾನಾಗಿಯೇ ಏಕೆ ಹೋಗಬೇಕು ಎಂದು ರಾಮನಾಥ ಸುಮ್ಮನಾದ. ಆದರೂ ಯಾವಾಗಲೂ ಅವನಿಗೆ ಕಲ್ಯಾಣಿಯದೇ ಯೋಚನೆಯಾಗಿತ್ತು.

ಸಾತಮ್ಮನಿಂದ ಕಲ್ಯಾಣಿಯ ಅನಾರೋಗ್ಯದ ವಿಷಯವನ್ನು ಆತ ಮರೆಮಾಚಿದ್ದ. ಸೊಸೆಗೆ ಹುಷಾರಿಲ್ಲವೆಂದು ತಿಳಿದರೆ ಆಕೆ ತನ್ನನ್ನು ಕತ್ತು ಹಿಡಿದು ತಳ್ಳಿ ಮೈಸೂರಿಗೆ ಕಳುಹಿಸುವಳೆಂದು ರಾಮನಾಥನಿಗೆ ಗೊತ್ತು. ಆದರೆ ಅದಕ್ಕೆ ಅವನು ಸಿದ್ಧವಾಗಿರಲಿಲ್ಲ.

ಅನಂತನಿಗೆ ಕಾಗದ ಬರೆದ ರಾಮನಾಥ–ಆಗಾಗ್ಗೆ ಕಲ್ಯಾಣಿಯ ಆರೋಗ್ಯದ ವಿಷಯ ತಿಳಿಸುವಂತೆ.

ಮುಂದೆ ಒಂದು ವಾರವಾದರೂ ಅನಂತನಿಂದ ಕಾಗದವೇ ಬರಲಿಲ್ಲ. ಆಗ ರಾಮನಾಥನಿಗೆ ನಿಜವಾಗಿಯೂ ದಿಗಿಲಾಯಿತು. ನಾಲ್ಕೈದು ದಿನಗಳ ನಂತರ ತಾನೇ ಮತ್ತೊಂದು ಪತ್ರವನ್ನು ಬರೆದ. ಅದಕ್ಕೂ ಜವಾಬು ಬರಲಿಲ್ಲ.

ಈಗ ರಾಮನಾಥನಿಗೆ ಮುಳ್ಳಿನ ಮೇಲೆ ಕುಳಿತಿರುವ ಅನುಭವವಾಯಿತು.

ಒಂದು ಪಕ್ಷ ಕಲ್ಯಾಣಿ ಹೋಗಿಬಿಟ್ಟರೆ? ಎಲ್ಲೋ ಪಟ್ಟಾಗಿ ಹಾಸಿಗೆ ಹಿಡಿದು ಮಲಗಿಬಿಟ್ಟಿರಬೇಕು. ಮನೆಯವರೆಲ್ಲ ಅವಳ ಆರೈಕೆಯಲ್ಲಿ ಮಗ್ನರಾಗಿ ತನಗೆ ಕಾಗದ ಬರೆಯುವುದನ್ನು ಮರೆತಿರಬೇಕು. ತನ್ನ ಹಠ, ಮೊಂಡತನದಿಂದಾಗಿ ಕಲ್ಯಾಣಿಯೇನಾದರೂ ಸತ್ತುಹೋದರೆ ತನ್ನ ಗತಿ ಏನು? ಪರೋಕ್ಷವಾಗಿ ತಾನೇ ಅವಳನ್ನು ಕೊಂದಂತಾಗುವುದಿಲ್ಲವೇ? ಆಮೇಲೆ ತಾನು ಬದುಕಿರುವುದಾದರೂ ಹೇಗೆ? ಕೊನೆಯವರೆವಿಗೂ ತನ್ನ ಚಿತ್ತ ತನ್ನನ್ನು ಕಾಡಿ ತಿನ್ನುವುದಿಲ್ಲವೇ? ಆಮೇಲೆ ತಾನು ಶಾಂತಿಯಿಂದಿರುವುದಾದರೂ ಹೇಗೆ? ಪಾಪ! ಕಲ್ಯಾಣಿ ಕೊನೆಯುಸಿರು ಬಿಡುತ್ತಾ ಮೈಸೂರಿನಲ್ಲಿದಾಳೋ ಏನೋ? ಅಥವಾ ಅವಳನ್ನು ಯಾವುದಾದರೂ ಆಸ್ಪತ್ರೆಗೆ ಸೇರಿಸಿದ್ದರೂ ಇರಬಹುದು. ಏನಾದರಾಗಲಿ, ತಾನಿನ್ನು ಹಠಮಾಡುವುದು ಸರಿಯಲ್ಲ. ಹಾಸಿಗೆ ಹತ್ತಿ ಮಲಗಿರುವ ಕಲ್ಯಾಣಿಯನ್ನು ನೋಡಿಕೊಂಡು ಬರುವುದೇ ವಾಸಿ. ಅವಳು ತನ್ನನ್ನು ಮಾತನಾಡಿಸಲಿ, ಬಿಡಲಿ, ಹೋಗಿ ನೋಡುವುದು ತನ್ನ ಕರ್ತವ್ಯ. ಸಧ್ಯ ತಾನು ಮೈಸೂರಿಗೆ ಹೋಗುವವರೆಗೂ ಕಲ್ಯಾಣಿ ಜೀವದಿಂದ ಇದ್ದರೆ ಸಾಕು........ನಾಳೆಯೇ ಯಾಕೆ ಹೊರಡಬಾರದು? ಹೇಗಿದ್ದರೂ ಭಾನುವಾರ.

ರಾಮನಾಥ ಎದ್ದು ತಾಯಿಯ ಬಳಿಗೆ ಬಂದು "ಅಮ್ಮ, ನಾಳೆ ಬೆಳಗಿನ ರೈಲಿನಲ್ಲಿ ಮೈಸೂರಿಗೆ ಹೋಗುತ್ತೇನೆ. ಕಲ್ಯಾಣಿಗೆ ಆರೋಗ್ಯ ಚೆನ್ನಾಗಿಲ್ಲವೆಂದು ಅನಂತ ಕಾಗದ ಬರೆದಿದಾರೆ" ಎಂದ.

"ಏನಾಗಿದೆಯಂತೋ?" ಆಕೆ ಗಾಬರಿಯಿಂದ ಕೇಳಿದರು.

"ನನಗೆ ತಿಳಿಯದಮ್ಮ."

"ಹೋದ ಕೂಡಲೇ ಒಂದು ಕಾಗದ ಹಾಕು. ಸಾಧ್ಯವಾದರೆ ಅವಳನ್ನೂ ಕರೆದುಕೊಂಡು ಬಂದುಬಿಡು...."

"..............."

"ಕಲ್ಯಾಣೀನೂ ಕರ್ಕೊಂಡು ಬಾ ಅಂದೆ. ಕೇಳಿಸಿತೆ?"

ರಾಮನಾಥ ತಗ್ಗಿಸಿದ ಮುಖ ಮೇಲೆತ್ತದೆ "ಹೂಂ" ಎಂದ. ಆದರೆ ಮನಸ್ಸು ನುಡಿಯಿತು—

"ಅವಳು ನಾನು ಹೋಗುವವರೆವಿಗೂ ಬದುಕಿರುತ್ತಾಳೋ ಇಲ್ಲವೋ

ಅದೇ ತಿಳಿಯದು. ಇನ್ನು ಪ್ರಯಾಣ ಮಾಡುವುದೆಲ್ಲಿಂದ ಬಂತು ?"

ತಾಯಿಯನ್ನು ವೃಥಾ ಗಾಬರಿಮಾಡಬಾರದೆಂದು ರಾಮನಾಥ ಸುಮ್ಮನಾದ.

ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಹಾಸಿಗೆಯ ಮೇಲೆ ಅವನು ಹೊರಳಾಡಿದ. ಬೀದಿಯಲ್ಲಿ ಯಾವ ಸದ್ದಾದರೂ ಅವನ ಹೃದಯ ಹಾರುತ್ತಿತ್ತು.

—ಟೆಲಿಗ್ರಾಮ್ ಏನಾದರೂ ಬಂತೋ ?

ಮನೆಯ ಮುಂದೆ ಸೈಕಲ್ ಬೆಲ್ಲಾಗುವುದನ್ನೂ, 'ಸಾರ್' ಎಂದು ಕೂಗುವುದನ್ನೂ ಆಶ್ಲೈಸಿದ.

ಎಲ್ಲವೂ ಭ್ರಮೆ :

ಬೆಳಗಿನ ಮೊದಲ ಟ್ರೈನಿಗೇ ರಾಮನಾಥ ಮೈಸೂರಿಗೆ ಹೊರಟ.

ಮೈಸೂರು ಹತ್ತಿರವಾದಂತೆ ಅವನ ಕಳವಳ ಹೆಚ್ಚಾಯಿತು. ಗಾಬರಿ, ಹೆದರಿಕೆಯಿಂದ ಕುಳಿತಿರಲಾರದೆ ಎದ್ದು ಅಲ್ಲಿಯೇ ತಿರುಗಾಡಿದ. ಅವನ ಕಳವಳ ನೋಡಿ ಪಕ್ಕದಲ್ಲಿ ಕುಳಿತ್ತಿದ್ದ ಮುದುಕರೊಬ್ಬರು

"ಯಾಕಪ್ಪಾ, ಮೈಗೆ ಚೆನ್ನಾಗಿಲ್ಲವೇ ?" ಎಂದು ಕೇಳಿದರು.

"ಹಾಗೇನಿಲ್ಲ" ಎಂದ ರಾಮನಾಥ.

ದಾರಿಯುದ್ದಕ್ಕೂ ಕಲ್ಯಾಣಿಯದೇ ನೆನಪು. ತನ್ನ ಬಾಳನ್ನು ಮೂರು ವರ್ಷಗಳ ಕಾಲ ಬೆಳಗಿದ ಕಲ್ಯಾಣಿ ಈಗ ತನ್ನನ್ನು ಬಿಟ್ಟು ಹೋಗಲಿದ್ದಾಳೆ. ಪರಲೋಕದ ಯಾತ್ರೆಯನ್ನು ಕೈಗೊಳ್ಳಲಿರುವ ಕಲ್ಯಾಣಿ ಈಗ ಅವನಿಗೆ ಸದ್ಗುಣಗಳ ಮೂರ್ತಿಯಾಗಿ ಕಂಡಳು. ಅವಳ ದೋಷ, ತಪ್ಪುಗಳೆಲ್ಲವನ್ನೂ ಈಗ ರಾಮನಾಥ ಬೇರೊಂದು ರೀತಿಯಲ್ಲಿ ನೋಡಿದ.

ಅವಳ ಹಠ, ಮೊಂಡತನಕ್ಕೆ ಈಗ ಬೇರೊಂದು ಹೆಸರು ಕೊಟ್ಟ— ತುಂಬಾ ದೃಢ ಮನಸ್ಸು ಕಲ್ಯಾಣಿಯದು.

ಮಾತೆತ್ತಿದರೆ ಅಳುಮೂಂಜಿಯಾಗುತ್ತಿದ್ದ ಕಲ್ಯಾಣಿ–ಈಗ ಅವನಿಗೆ ಮೃದು ಹೃದಯವಳು ಎನಿಸಿತು.

ದುಂದುಗಾರಿಕೆ ಧಾರಾಳತನವಾಗಿ ಕಂಡಿತು.

ಒಟ್ಟನಲ್ಲಿ ಕಲ್ಯಾಣಿ ಅಪರಂಜಿಯಂತಹ ಹುಡುಗಿ. ಅಂತಹ

ಹುಡುಗಿಯೊಡನೆ ಸಂಸಾರ ಮಾಡಿಕೊಂಡಿರುವುದು ತನ್ನ ಹಣೆಯಲ್ಲಿ ಬರೆದಿಲ್ಲ. ಅಂತಹ ಹೆಂಡತಿಯನ್ನು ತಾನಾಗಿಯೇ ಕೈಯಾರ ಸಾವಿನ ದವಡೆಗೆ ಒಪ್ಪಿಸಿದ ಹಾಗಾಯಿತು.

'ಅಯ್ಯೋ ಕಲ್ಯಾಣಿ...' ಎಂದು ನಿಟ್ಟುಸಿರುಬಿಟ್ಟ ರಾಮನಾಥ.

ಸ್ಟೇಷನ್ನಿನಲ್ಲಿ ಇಳಿದೊಡನೆ ರಾಮನಾಥನಿಗೆ ಮತ್ತೊಂದು ಯೋಚನೆ ಬಂತು.

—ಹತ್ತಿರದಲ್ಲಿಯೇ ಆಸ್ಪತ್ರೆ ಇದೆ. ಇಲ್ಲೇ ವಿ ಚಾ ರಿ ಸಿ ಕೊಂ ಡು ಮನೆಗೆ ಹೋದರೆ ಹೇಗೆ?

ತಕ್ಷಣವೇ ರಾಮನಾಥನ ಕಾಲುಗಳು ಆಸ್ಪತ್ರೆಯ ಕಡೆ ಧಾವಿಸಿದವು. ಚೆಲುವಾಂಬಾ ಆಸ್ಪತ್ರೆ, ಕೃಷ್ಣರಾಜೇಂದ್ರ ಆಸ್ಪತ್ರೆಗಳಲ್ಲಿ ಹೋಗಿ ವಿಚಾರಿಸಿದ.

"ಕಲ್ಯಾಣಿ ಅಂತ ಯಾರಾದರೂ ರೋಗಿ ಇದಾರೆಯೇ?"

"ಏನು ಖಾಯಿಲೆ ಆಕೆಗೆ? ಇಲ್ಲಿಗೆ ಸೇರಿ ಎಷ್ಟು ದಿವಸವಾಯಿತು?"

ರಾಮನಾಥ ತೊದಲಿದ "ನನಗೆ ತಿಳಿಯದು. ಒಟ್ಟಿನಲ್ಲಿ ಆಕೆಗೆ ತುಂಬಾ ಸೀರಿಯಸ್ ಆಗಿರಬೇಕು."

"ಆ ಹೆಸರಿನವರು ಯಾರೂ ಇಲ್ಲವಲ್ಲ" ಎಂದು ಉತ್ತರ ಪಡೆದು ಮನೆಯ ಕಡೆ ಹೊರಟ.

ಮನೆ ನಿಶ್ಯಬ್ದವಾಗಿತ್ತು. ಮನೆಯ ಮುಂದೆ ಯಾರೂ ಇರಲಿಲ್ಲ. ಬಿಸಿಲಿನಲ್ಲಿ ಮನೆ ಭೀಕರವಾಗಿ ಕಾಣಿಸಿತು ರಾಮನಾಥನಿಗೆ. ಕೊನೆಗೆ ಆನಂದ ಸಹಿತ ಮನೆಯ ಮುಂದೆ ಇದ್ದಂತೆ ತೋರಲಿಲ್ಲ.

ಮನೆಯ ಮೌನ ಕಂಡು ರಾಮನಾಥನಿಗೆ ಹೆದರಿಕೆಯಾಯಿತು. ಒಳಗಿನಿಂದೇನಾದರೂ ಅಳುವ ಸದ್ದು ಬರುವುದೇನೋ ಎಂದು ಆಲೈಸಿದ ರಾಮನಾಥ.

ಯಾರೋ ಅಸ್ಪಷ್ಟವಾಗಿ ಮಾತನಾಡಿದ ಸದ್ದು ಕೇಳಿಸಿತು. ರಾಮನಾಥ ತನ್ನಲ್ಲಿದ್ದ ಚೈತನ್ಯವನ್ನೆಲ್ಲಾ ಒಟ್ಟುಗೂಡಿಸಿ ಒಳಗೆ ಕಾಲಿಟ್ಟ.

ಹಾಲಿನಲ್ಲಿ ಯಾರೂ ಇರಲಿಲ್ಲ. ರಾಮನಾಥನಿಗೆ ನಿಂತುಕೊಳ್ಳುವ

ಶಕ್ತಿಯೇ ಇರಲಿಲ್ಲ. ಅವನು ಅಲ್ಲಿಯೇ ಇದ್ದ ಕುರ್ಚಿಯೊಂದರ ಮೇಲೆ ಕುಸಿದುಬಿದ್ದ.

ಹಾಲಿನ ಎದುರಿಗೆ ಇದ್ದ ರೂಮು ಮೊದಲು ಕಲ್ಯಾಣಿಯದಾಗಿತ್ತು. ರೂಮಿನ ಬಾಗಿಲು ತೆಗೆದಿತ್ತು. ರಾಮನಾಥ ಕುಳಿತಲ್ಲಿಂದಲೇ ಆ ಕಡೆ ಕಣ್ಣು ಹೊರಳಿಸಿದ.

ರೂಮಿನಲ್ಲಿದ್ದ ಮಂಚ ಖಾಲಿಯಾಗಿತ್ತು. ಕೊನೆಗೆ ಹಾಸಿಗೆಯನ್ನೂ ಸಹಿತ ಹಾಸಿರಲಿಲ್ಲ. ಅಲ್ಲಿದ್ದ ಸ್ಟಾಂಡಿನ ಮೇಲೆ ಕಲ್ಯಾಣಿಯ ಬಟ್ಟೆಗಳು ಸಹ ಇರಲ್ಲಿಲ್ಲ.

ಹಾಗಾದರೆ .... ಹಾಗಾದರೆ......

ಮಂಚವೂ ಖಾಲಿಯಾಗಿರಬೇಕಾದರೆ? ಅವಳು ಯಾವಾಗಲೂ ಮಲಗುತ್ತಿದ್ದ ಮಂಚವದು. ಅಳಿಯತನ ನಡೆಸಿಕೊಳ್ಳಲು ತಾನವರ ಮನೆಗೆ ಹೋಗುತ್ತಿದ್ದಾಗ ತಾನೂ ಅದರಲ್ಲಿ ಪಾಲು ಪಡೆಯುತ್ತಿದ್ದುದುಂಟು.

ಆ ಮಂಚವೀಗ ಖಾಲಿಯಾಗಿದೆ.

ಹಾಗಾದರೆ ಕಲ್ಯಾಣಿ....

ರಾಮನಾಥನಿಗೆ ತಲೆ ತಿರುಗಿದಂತಾಯಿತು.

ಈ ಮೌನವೇಕೆ?

ಅಷ್ಟರಲ್ಲಿ ವಿಜಯಮ್ಮ ಒಳಗಿನಿಂದ ಬಂದರು. ರಾಮನಾಥನಿಗೆ ತಲೆ ಎತ್ತಿ ಧೈರ್ಯವಾಗಿ ಆಕೆ ಮುಖವನ್ನು ನೋಡುವುದಾಗಲಿಲ್ಲ.

ವಿಜಯಮ್ಮನಿಗೆ ಕುರ್ಚಿಯ ಮೇಲೆ ಕುಳಿತಿರುವವರು ಯಾರೆಂದು ತಟ್ಟನೆ ತಿಳಿಯಲಿಲ್ಲ. ಯಾರೋ ಅನಂತನ ಸ್ನೇಹಿತನಿರಬೇಕೆಂದು ಭಾವಿಸಿ,

"ಅನಂತ ಊರಿನಲ್ಲಿಲ್ಲ"...ಎಂದರು.

ಕೂಡಲೇ ಅವರಿಗೆ ತಮ್ಮ ತಪ್ಪು ತಿಳಿಯಿತು. ನಾಲಿಗೆ ಕಚ್ಚಿಕೊಂಡು

"ನೀವೇ? ತಿಳಿಯಲಿಲ್ಲ. ವಯಸ್ಸಾಯಿತು. ಕಣ್ಣು ಸರಿಯಾಗಿ ಕಾಣೋಲ್ಲ...."

ಆಕೆ ಕಲ್ಯಾಣಿಯ ವಿಷಯವನ್ನೇ ಎತ್ತಲಿಲ್ಲ. ರಾಮನಾಥನ ಹೃದಯ ಕಲ್ಯಾಣಿಯ ವಿಷಯ ತಿಳಿಯಲು ತುಡಿದುಕೊಳ್ಳುತ್ತಿತ್ತು.

"ಆನಂದೂ, ಇವರನ್ನೂ ಕರೆಯೋ" ಎಂದರು ವಿಜಯಮ್ಮ.

"ಕ....ಕಲ್ಯಾಣಿ...ಹೇಗಿದಾಳೆ....?" ರಾಮನಾಥ ಕೇಳಿದ.

"ಈಗಲೂ ಅಷ್ಟೇನೂ ಹುಷಾರಾಗಿರಲಿಲ್ಲ. ಇನ್ನೂ ಒಂದು ಎರಡು ತಿಂಗಳು ಹಾಗೇ ಇರೋದು ಸ್ವಾಭಾವಿಕ. ಅದಕ್ಕೇನೂ ಗಾಬರಿಯಾಗ ಬೇಕಿಲ್ಲ...."

"ಎಲ್ಲಿದಾಳೆ ಕಲ್ಯಾಣಿ?" ರಾಮನಾಥ ಚೇತರಿಸಿಕೊಂಡು ಕೇಳಿದ.

"ಅವಳು ಇವತ್ತಿನ ಬೆಳಗಿನ ರೈಲಿಗೆ ಆನಂತನೊಡನೆ ಬೆಂಗಳೂರಿಗೆ ಹೋದಳು...."

"ಬೆಂಗಳೂರಿಗೆ!"

"ಹೂಂ. ನಾವೂ ಎಷ್ಟೋ ಹೇಳಿದೆವು–ಕಾಗದ ಬರೆದು ಹೋಗೂಂತ. ಆದರೆ ಅವಳ ಹಠಮಾರಿತನ ನಿಮಗೆ ಗೊತ್ತಿಲ್ಲ. ಭಾನು ವಾರ ಅವರು ಫ್ಯಾಕ್ಟರಿಗೆ ಹೋಗದೆ ಮನೆಯಲ್ಲೇ ಇರ್ತಾರೇಂತ ನಿಂತ ಕಾಲಿನ ಮೇಲೆ ಹೊರಟುಬಿಟ್ಟಳು.

ರಾಮನಾಥನಿಗೆ ಸಂತೋಷ....ಆಶ್ಚರ್ಯ....ಸ್ವಲ್ಪ ನಿರಾಶೆ.

ಕೊನೆಗೂ ತಾನೊಬ್ಬನೇ ಅಲ್ಲ ಸೋತವನು. ಕಲ್ಯಾಣಿಯೂ ಸೋತಿದ್ದಾಳೆ. ಇಬ್ಬರೂ ಸೋತಿದ್ದಾರೆ. ಅವಳಿಲ್ಲದಿರುವುದು ಕೊಂಚ ನಿರಾಶೆಯಾದರೂ ಅವಳೂ ತಗ್ಗಿದ್ದಾಳೆ ಎಂಬ ಸಂತೋಷವೂ ಇತ್ತು.

"ಏನಾಗಿತ್ತು ಅವಳಿಗೆ...."

ವೆಂಕಟಾಚಲಯ್ಯನವರು ಒಳಗೆ ಬಂದುದನ್ನು ನೋಡಿ ವಿಜಯಮ್ಮ ಅರ್ಥಗರ್ಭಿತವಾಗಿ ಗಂಡನ ಕಡೆಗೊಮ್ಮೆ ನೋಡಿ ಒಳಗೆ ಹೊರಟು ಹೋದರು.

ರಾಮನಾಥ ಮತ್ತೆ ಕೇಳಿದ "ಏನಾಗಿತ್ತು ಕಲ್ಯಾಣಿಗೆ? ಅನಂತನ ಕಾಗದ ಓದಿ ತುಂಬಾ ಗಾಬರಿಯಾಯಿತು. ಅದಕ್ಕೇ ಬಂದುಬಿಟ್ಟೆ...."

ಅವಳೂ ಗಾಬರಿಯಾಗಿ ಹೊರಟುಬಿಟ್ಟಳು" ಎಂದರು ವೆಂಕಟಾಚಲಯ್ಯ.

"ಗಾಬರಿ ಯಾಕೆ?"

"ಶುದ್ಧ ಹುಡುಗುಬುದ್ಧಿ. ತಾಯಿಯಾಗುವವರೆಲ್ಲ ಸತ್ತುಹೋಗ್ತಾರೆಯೇ ಹೇಳಿ? ಅವಳಿಗೆ ಅದೇ ಹೆದರಿಕೆ—ತಾನಿನ್ನು ಆರು ತಿಂಗಳ ಮೇಲೆ ಹೇಗಿದ್ದರೂ ಬದುಕೋದಿಲ್ಲ. ಆರೇ ತಿಂಗಳು ತನ್ನ ಆಯಸ್ಸು ಇರೋದು. ಅವರ ಕೈಲಿ ಜಗಳವಾಡಿ ಬಂದುಬಿಟ್ಟೆ. ನಂದೂ ತಪ್ಪಿದೆ. ಬದುಕಿರುವ ಆರು ತಿಂಗಳನ್ನೂ ಅವರ ಹತ್ತಿರವೇ ಕಳೆದು ಕಣ್ಣುಮುಚ್ಚುತ್ತೀನಿ. ಇನ್ನು ಇಲ್ಲಿ ಒಂದು ದಿನವೂ ಇರೋದಿಲ್ಲಾಂತ ಹೊರಟುಬಿಟ್ಟಳು....."

"ಅಂದರೆ....ಅಂದರೆ....ಕಲ್ಯಾಣಿ...."

ವೆಂಕಟಾಚಲಯ್ಯನವರು ತಲೆ ಅಲುಗಿಸಿದರು.

ಅಬ್ಬ! ಹಿಮಾಲಯ ಪರ್ವತದಂತೆ ಎದೆಯ ಮೇಲೆ ಹೇರಿಕೊಂಡಿದ್ದ ಭಾರ ಮಂಜಿನಂತೆ ಕರಗಿಹೋಯಿತು. ರಾಮನಾಥನ ಹೃದಯ ಹಗುರವಾಯಿತು.

"ಇನ್ನಾರು ತಿಂಗಳು ಮಾತ್ರವೇ ಏನು ಅವಳು ಬದುಕೋದು?" ರಾಮನಾಥ ಹಸನ್ಮುಖದಿಂದ ಕೇಳಿದ.

"ಹಾಗಂತ ಅವಳು ತಿಳ್ಕೊಂಡಿದಾಳೆ"

ರಾಮನಾಥ ಮೆಲುವಾಗಿ ನಕ್ಕು, ವಿಜಯಮ್ಮ ತಂದುಕೊಟ್ಟ ಕಾಫಿಯ ಬಟ್ಟಲನ್ನು ಕೈಗೆ ತೆಗೆದುಕೊಂಡು ಹೇಳಿದ.

"ಅವಳನ್ನ ಸಾಯೋಕೆ ಬಿಡೋರ್‍ಯಾರು?"

---